عودة إلى الكتاب والسنة على منهج السلف الصالح

ಮನ್‌ಹಜು ಸ್ಸಲಫ್‌ನ ಆಧಾರದಲ್ಲಿ ಕುರ್‌ಆನ್ ಮತ್ತು ಸುನ್ನಃದೆಡೆಗೆ



# ಅಲ್‌ಹುದಾ

ಜನವರಿ 1-15, 2013 صفر ١٦-٣٠/ ١٤٣٤ هـ


# ಜಮಾಅತ್ ಅಹ್ಲೆ ಹದೀಸ್ ಮನ್‌ಹಜುಸ್ಸಲಫ್‌ನಲ್ಲಿದೆ

ಅಶ್ಶೈಖ್ ಮುಹಮ್ಮದ್ ಸಾಲಿಹ್ ಅಲ್‌ಮುನಜ್ಜಿದ್ (ಹಫಿಝಹುಲ್ಲಾಹು ತಆಲಾ)

ಇದು ಭಾರತದಲ್ಲಿರುವ ಜಮಾಅತ್ ಅಹ್ಲೆ ಹದೀಸ್‌ನ ಬಗ್ಗೆಯಿರುವ ಒಂದು ಸಂಕ್ಷಿಪ್ತ ಪರಿಚಯವಾಗಿದೆ.

'ಅಲ್‌ಮೌಸೂಅತುಲ್ ಮುಯಸ್ಸರತಿ ಲಿಲ್‌ಅದ್ಯಾನಿ ವಲ್‌ಮದಾಹಿಬಿ ವಲ್‌ಅಹ್‌ಝಾಬಿಲ್ ಮುಆಸಿರಃ' ಎಂಬ ಗ್ರಂಥದಲ್ಲಿ ಹೀಗೆ ಹೇಳಲಾಗಿದೆ:

"ಜಮಾಅತ್ ಅಹ್ಲೆ ಹದೀಸ್ ಎಂಬುದು ಭಾರತೀಯ ಉಪಖಂಡದ ಅತ್ಯಂತ ಪುರಾತನ ಆಂದೋಲನವಾಗಿದೆ. ಇದು ಕುರ್‌ಆನ್ ಮತ್ತು ಸುನ್ನತ್ತನ್ನು ಅನುಸರಿಸಲು ಹಾಗೂ ಅವೆರಡನ್ನು ಸಹಾಬಾಗಳು, ತಾಬಿಈನ್‌ಗಳು ಮತ್ತು ಅವರನ್ನು ಉತ್ತಮ ವಿಧದಲ್ಲಿ ಅನುಸರಿಸಿದವರಾದ ಅಸ್ಸಲಫು ಸ್ಸಾಲಿಹ್‌ಗಳು ಅರ್ಥ ಮಾಡಿಕೊಂಡಂತೆ ಅರ್ಥಮಾಡಿಕೊಳ್ಳಲು

7 ನೇ ಪುಟಕ್ಕೆ

## ಜನರನ್ನು ನಗಿಸುವ, ಹಾಸ್ಯ ಮಾಡುವ ಮೂಲಕ

# ದಅ್‌ವಾ ಮಾಡಬಹುದೇ?

ಅಶ್ಶೈಖ್ ಸಾಲಿಹ್ ಇಬ್ನ್ ಫೌಝಾನ್ ಅಲ್‌ಫೌಝಾನ್

ಹಾಸ್ಯ, ನಗು, ತಮಾಷೆಗಳ ಮೂಲಕ ದಅ್‌ವಾ ಮಾಡಬಾರದು. ದಅ್‌ವಾ ಮಾಡಬೇಕಾದುದು ಕುರ್‌ಆನ್, ಸುನ್ನತ್ ಮತ್ತು ಉಪದೇಶದ ಮೂಲಕವಾಗಿದೆ. ಅದು ಹಾಸ್ಯ ಮಾಡುವುದು, ಜನರನ್ನು ನಗಿಸುವುದು ಮೊದಲಾದವುಗಳ ಮೂಲಕ ಆಗಿರಬಾರದು. ಇದು ರಿಫ್ಖ್ (ಮೃದುತ್ವ)ನಲ್ಲಿ ಸೇರಿದ್ದಲ್ಲ. ಕೆಲವರು ಇದು ರಿಫ್ಖ್‌ನಲ್ಲಿ ಸೇರಿದ್ದೆಂದು ಹೇಳುತ್ತಾರೆ. ರಿಫ್ಖ್ ಎಂದರೆ ಅದು ಹಾಸ್ಯದ ಹಂತಕ್ಕೆ ತಲುಪುವ ನಗು, ತಮಾಷೆಯಲ್ಲ. ಇದು ದಅ್‌ವಾ ಮಾಡುವವನ ಸ್ಥಾನವನ್ನು ಕುಗ್ಗಿಸುವುದಾಗಿದೆ. ದಅ್‌ವಾ ಮಾಡುವವನು ಹೀಗೆ ನಗುವುದು, ನಗಿಸುವುದನ್ನು ಕಾಣುವಾಗ ಅದು ಜನರ ಮಧ್ಯೆ ಅವನ ಸ್ಥಾನವನ್ನು ಕುಗ್ಗಿಸುತ್ತದೆ. ಅವನೊಬ್ಬ ಹಾಸ್ಯವಸ್ತುವಾಗಿ ಬಿಡುತ್ತಾನೆ. ಅವನು ಅಲ್ಲಾಹನೆಡೆಗೆ ಕರೆ ನೀಡುವವನಲ್ಲ. ಅವನೊಬ್ಬ ಹಾಸ್ಯನಟನಂತೆ ಮಾರ್ಪಡುತ್ತಾನೆ. ಇದು ದಅ್‌ವಾದ ಸ್ಥಾನವನ್ನು ಮತ್ತು ದಅ್‌ವಾ ಮಾಡುವವನ ಸ್ಥಾನವನ್ನು ಕುಗ್ಗಿಸುತ್ತದೆ.

ನಿಜವಾದ ದಾಈ ಯಾರೆಂದರೆ ಗಂಭೀರವಾಗಿ ಅಲ್ಲಾಹನೆಡೆಗೆ ಕರೆ ನೀಡುವವನಾಗಿದ್ದಾನೆ. ಕುರ್‌ಆನ್ ಮತ್ತು ಸುನ್ನತ್ತಿನ ಮೂಲಕ ಕರೆ ನೀಡುವವನಾಗಿದ್ದಾನೆ. ಹಾಸ್ಯ ಮತ್ತು ತಮಾಷೆಯು ಅಲ್ಲಾಹನೆಡೆಗೆ ಕರೆ ನೀಡುವುದರಲ್ಲಿ ಸೇರಿದ್ದಾಗಿದೆಯೆಂದು ಕುರ್‌ಆನ್‌ನಲ್ಲೋ ಸುನ್ನತ್‌ನಲ್ಲೋ ಎಲ್ಲೂ ಬಂದಿಲ್ಲ.

ಅಲ್ಲಾಹು ಅವನ ಪ್ರವಾದಿಯೊಂದಿಗೆ ಹೇಳುತ್ತಾನೆ:

﴿ ادْعُ إِلَىٰ سَبِيلِ رَبِّكَ بِالْحِكْمَةِ وَالْمَوْعِظَةِ الْحَسَنَةِ وَجَادِلْهُم بِالَّتِي هِيَ أَحْسَنُ ﴾

"ತಾವು ತಮ್ಮ ರಬ್ಬ್‌ನ ಮಾರ್ಗದೆಡೆಗೆ ಹಿಕ್ಮತ್ ಮತ್ತು ಸುಂದರವಾದ ಉಪದೇಶದೊಂದಿಗೆ ಕರೆ ನೀಡಿರಿ. ಯಾವುದು ಅತ್ಯುತ್ತಮವಾಗಿದೆಯೋ ಅದರ ಮೂಲಕ ಅವರೊಂದಿಗೆ ತರ್ಕಿಸಿರಿ." [ಕುರ್‌ಆನ್ 16:125]

ಇಲ್ಲಿ 'ಹಿಕ್ಮತ್' ಎಂದರೆ ಇಲ್ಮ್. ಅದು

4 ನೇ ಪುಟಕ್ಕೆ

## ಅಕೀದಃ, ಮನ್‌ಹಜ್ ಮತ್ತು ಅಖ್ಲಾಕ್ ಪರಸ್ಪರ ಬಂಧಿತವಾಗಿವೆ

ಅಶ್ಶೈಖ್ ಹಸನ್ ಅಬ್ದುಲ್ ವಹ್ಹಾಬ್ ಮರ್ಝೂಕ್ ಅಲ್‌ಬನ್ನಾ (ಹಫಿಝಹುಲ್ಲಾಹ್)

ಅಕೀದಃ, ಮನ್‌ಹಜ್ ಮತ್ತು ಅಖ್ಲಾಕ್ ಒಂದಕ್ಕೊಂದು ಬಂಧಿತವಾಗಿವೆ. ಅವುಗಳನ್ನು ಪರಸ್ಪರ ಬೇರ್ಪಡಿಸಲಾಗದು.

ಆದ್ದರಿಂದ ತಾಲಿಬುಲ್ ಇಲ್ಮ್ (ಇಲ್ಮ್ ಕಲಿಯುವ ವ್ಯಕ್ತಿ) ಸ್ವಸ್ಥವಾದ ಅಕೀದಃ (ಸರಿಯಾದ ಇಸ್ಲಾಮೀ ವಿಶ್ವಾಸ), ಕರಾರುವಾಕ್ಕಾದ ಮನ್‌ಹಜ್ (ವಿಧಾನಶಾಸ್ತ್ರ) ಮತ್ತು ಅತ್ಯುತ್ತಮವಾದ ಅಖ್ಲಾಕ್ ಮತ್ತು ಆದಾಬ್ (ಸ್ವಭಾವಗುಣ ಮತ್ತು ಶಿಷ್ಟಾಚಾರ)ಗಳನ್ನು ಹೊಂದಿರುವುದು ಕಡ್ಡಾಯವಾಗಿದೆ.

ಇಲ್ಮ್ ಕಲಿಯುವ ವ್ಯಕ್ತಿ ಅಕೀದಃ ಮತ್ತು ಮನ್‌ಹಜನ್ನು ಕಲಿಯುವಾಗ ಅವನು ಅದರ ಜೊತೆಯಲ್ಲೇ ಅಖ್ಲಾಕ್ ಮತ್ತು ಆದಾಬ್‌ಗಳನ್ನೂ ಕಲಿಯಬೇಕಾಗಿದೆ. ಆದ್ದರಿಂದ ಓ ಇಲ್ಮ್ ಕಲಿಯುವ ಜನರೇ! ಅಲ್ಲಾಹನನ್ನು ಭಯಪಡಿರಿ. ಓ ಇಲ್ಮ್ ಕಲಿಯುವ ಜನರೇ! ಅಲ್ಲಾಹನನ್ನು ಭಯಪಡಿರಿ. ■

ಅಶ್ಶೈಖ್ ಸಾಲಿಹ್ ಇಬ್ನ್ ಫೌಝಾನ್

## ಮೀಲಾದ್ ಆಚರಣೆ ಬಿದ್‌ಅತ್

ಮೀಲಾದ್ ಆಚರಣೆಯು ಮೂರು ಉತ್ತಮ ತಲೆಮಾರುಗಳ ಬಳಿಕ ಹೊಸದಾಗಿ ಆಚರಣೆಗೆ ಬಂದ ನಿಷಿದ್ಧ ಬಿದ್‌ಅತ್ ಆಗಿದೆಯೆಂಬುದರಲ್ಲಿ ಯಾವುದೇ ಅನುಮಾನವಿಲ್ಲ. ಇದನ್ನು ಮೊಟ್ಟಮೊದಲು ಜಾರಿಗೆ ತಂದದ್ದು ಹಿಜ್ರಾ ಆರನೆ ಶತಮಾನದ ಕೊನೆಯಲ್ಲಿ ಅಥವಾ ಹಿಜ್ರಾ ಏಳನೆ ಶತಮಾನದ ಆದಿಯಲ್ಲಿ ಇರ್ಬಿಲ್ ಎಂಬ ರಾಜ್ಯವನ್ನು ಆಳುತ್ತಿದ್ದ ಅಲ್‌ಮುಝಫ್ಫರ್ ಅಬೂ ಸಈದ್ ಕೌಕಬೂರೀ ಎಂಬ ಅರಸನಾಗಿದ್ದನು. ಇದನ್ನು ಇಬ್ನ್ ಕಸೀರ್, ಇಬ್ನ್ ಖಲ್ಲಿಕಾನ್ ಮೊದಲಾದ ಚರಿತ್ರೆಗಾರರು ಸ್ಪಷ್ಟಪಡಿಸಿದ್ದಾರೆ.

ಪ್ರವಾದಿ(ﷺ)ರವರನ್ನು ಆದರಿಸಬೇಕಾದುದು ಅವರನ್ನು ಅನುಸರಿಸುವ ಮೂಲಕ, ಅವರ ಆಜ್ಞಾಪಾಲನೆ ಮಾಡುವ ಮೂಲಕ, ಅವರು ವಿರೋಧಿಸಿದ್ದರಿಂದ ದೂರ ಸರಿಯುವ ಮೂಲಕ ಮತ್ತು ಅವರನ್ನು ಪ್ರೀತಿಸುವ ಮೂಲಕವಾಗಿರಬೇಕೇ ವಿನಾ ಬಿದ್‌ಅತ್, ಖುರಾಫಾತ್ ಮತ್ತು ಅವಿಧೇಯತೆಯ ಮೂಲಕವಲ್ಲ. ಮೀಲಾದ್ ಆಚರಣೆ ಮಾಡುವುದು ಇಂತಹ ಬಿದ್‌ಅತ್‌ಗಳಲ್ಲಿ ಸೇರಿದ್ದಾಗಿದೆ. ಯಾಕೆಂದರೆ ಅದು ಅವಿಧೇಯತೆಯಾಗಿದೆ.

ಪ್ರವಾದಿ(ﷺ)ರವರನ್ನು ಅತ್ಯಧಿಕವಾಗಿ ಆದರಿಸಿದವರು ಸಹಾಬಾ ಕಿರಾಮ್ ಆಗಿದ್ದರು. ಉದಾ: ಉರ್ವಾ ಇಬ್ನ್ ಮಸ್‌ಊದ್ ಎಂಬವರು ಕುರೈಶೀಗಳೊಂದಿಗೆ ಹೇಳುತ್ತಾರೆ: "ಓ ಜನರೇ, ಅಲ್ಲಾಹನ ಮೇಲಾಣೆ, ನಾನು ಕಿಸ್ರಾ, ಕೈಸರ್ ಮತ್ತು ಇತರ ಅನೇಕ ಸಾಮ್ರಾಟರ ಆಸ್ಥಾನಗಳಿಗೆ ತೆರಳಿದ್ದೇನೆ. ಆದರೆ ಮುಹಮ್ಮದ್(ﷺ)ರವರನ್ನು ಅವರ ಅನುಯಾಯಿಗಳು ಆದರಿಸುವಂತೆ ಆ ಸಾಮ್ರಾಟರ ಪ್ರಜೆಗಳು ಅವರನ್ನು ಆದರಿಸುವುದಾಗಿ ನಾನು ಕಂಡಿಲ್ಲ. ಅಲ್ಲಾಹನ ಮೇಲಾಣೆ, ಪ್ರವಾದಿ(ﷺ)ರವರ ಮೇಲಿರುವ ಗೌರವದಿಂದಾಗಿ ಅವರ ಅನುಯಾಯಿಗಳು ಅವರೆಡೆಗೆ ತಲೆಯೆತ್ತಿ ನೋಡುತ್ತಲೂ ಇರಲಿಲ್ಲ."

ಅವರು ಪ್ರವಾದಿ(ﷺ)ರವರನ್ನು ಇಷ್ಟೊಂದು ಆಳವಾಗಿ ಗೌರವಿಸಿದ್ದರೂ ಸಹ ಅವರ ಜನ್ಮದಿನವನ್ನು ಅವರು ಆಚರಿಸಲಿಲ್ಲ. ಒಂದು ವೇಳೆ ಪ್ರವಾದಿ(ﷺ)ರವರ ಜನ್ಮದಿನಾಚರಣೆಯು ಶರೀಅತ್ ನಿರ್ದೇಶಿಸಿದ್ದಾಗಿರುತ್ತಿದ್ದರೆ ಖಂಡಿತವಾಗಿಯೂ ಅವರು ಅದನ್ನು ತೊರೆಯುತ್ತಿರಲಿಲ್ಲ. ■

ಈ ಪತ್ರಿಕೆಯಲ್ಲಿ ಕುರ್‌ಆನಿನ ಆಯತ್‌ಗಳು ಮತ್ತು ಪ್ರವಾದಿ(ﷺ)ರವರ ಹದೀಸ್‌ಗಳಿರುವುದರಿಂದ ಇದನ್ನು ಅನಾದರತೆಗೆ ಒಳಗಾಗದಂತೆ ಕಾಪಾಡಿಕೊಳ್ಳಬೇಕಾಗಿ ವಿನಂತಿ

# ಸಂಪಾದಕೀಯ

بسم الله الرحمن الرحيم

الحمد لله رب العالمين والصلاة والسلام على أشرف الأنبياء والمرسلين وآله وصحبه أجمعين أما بعد

## ಇತರಿಗಾಗಿ ಕಲಿಯುವ ಮುಂಚೆ ನಮಗಾಗಿ ಕಲಿಯೋಣ

ಇಲ್ಮ್ ಎಂಬುದು ಒಂದು ಪ್ರಕಾಶವಾಗಿದೆ. ಅದು ಮನುಷ್ಯನನ್ನು ಅಂಧಕಾರಗಳಿಂದ ಬೆಳಕಿನೆಡೆಗೆ ಒಯ್ಯುತ್ತದೆ. ಇಲ್ಮ್ ಅಂಬಿಯಾಗಳ ಉತ್ತರಾಧಿಕಾರದ ಸೊತ್ತಾಗಿದೆ. ಇಲ್ಮ್ ಸ್ವರ್ಗದೆಡೆಗಿರುವ ದಾರಿಯಾಗಿದೆ. ಇಲ್ಮ್ ಇರುವ ವ್ಯಕ್ತಿಯನ್ನು ಅಲ್ಲಾಹು ಇಹಲೋಕದಲ್ಲೂ ಪರಲೋಕದಲ್ಲೂ ಉನ್ನತಿಗೇರಿಸುತ್ತಾನೆ. ಇಲ್ಮ್ ಮನುಷ್ಯನನ್ನು ಪಥಭ್ರಷ್ಟತೆಯಿಂದ ಮತ್ತು ಪಾಪಕೃತ್ಯಗಳಿಂದ ತಡೆಯುತ್ತದೆ.

ಆದರೆ ನಾವು ಇಲ್ಮ್ ಕಲಿಯಬೇಕಾದುದು ನಮ್ಮ ಸ್ವಂತಕ್ಕಾಗಿಯೇ ಹೊರತು ಇನ್ನೊಬ್ಬರಿಗಾಗಿ ಅಲ್ಲ. ನಮ್ಮಿಂದ ಅಜ್ಞಾನವನ್ನು ತೊಲಗಿಸುವುದಕ್ಕಾಗಿ ಎಂಬ ನಿಯ್ಯತ್ತಿನೊಂದಿಗೆ ನಾವು ಇಲ್ಮ್ ಕಲಿಯಬೇಕಾಗಿದೆ. ಅದರ ನಂತರವೇ ನಾವು ಇನ್ನೊಬ್ಬರ ಅಜ್ಞಾನವನ್ನು ಹೋಗಲಾಡಿಸಬೇಕಾಗಿದೆ. ನಾವು ಕಲಿತ ಇಲ್ಮ್ ನಮ್ಮೊಂದಿಗೆ ಏನನ್ನು ಆವಶ್ಯಪಡುತ್ತದೋ ಅದು ನಮ್ಮಲ್ಲಿರಬೇಕಾಗಿದೆ. ಹಾಗಾದರೆ ಮಾತ್ರ ಈ ಮೇಲಿನ ಶ್ರೇಷ್ಠತೆಗಳು ನಮಗೆ ಲಭ್ಯವಾಗುತ್ತವೆ. ಸುಫ್ಯಾನ್ ಅಸ್ಸೌರೀ(رحمه الله) ಹೇಳಿದರು:

يَهْتِفُ الْعِلْمُ بِالْعَمَلِ فَإِنْ أَجَابَهُ وَإِلَّا ارْتَحَلَ

"ಇಲ್ಮ್ ಅಮಲನ್ನು ಕರೆಯುತ್ತದೆ. ಅದು (ಅಮಲ್) ಉತ್ತರಿಸಿದರೆ ಸರಿ. ಇಲ್ಲದಿದ್ದರೆ ಅದು (ಇಲ್ಮ್) ಹೊರಟುಹೋಗುತ್ತದೆ." [ಜಾಮಿಉ ಬಯಾನಿಲ್ ಇಲ್ಮ್]. ಅಶ್ಶಅ್‌ಬೀ(رحمه الله), ವಕೀಅ್(رحمه الله) ಮುಂತಾದ ಸಲಫ್‌ಗಳು ಹೇಳುತ್ತಿದ್ದರು:

كُنَّا نَسْتَعِينُ عَلَى حِفْظِ الْحَدِيثِ بِالْعَمَلِ بِهِ

"ನಾವು ಹದೀಸನ್ನು ಕಂಠಪಾಠ ಮಾಡಲು ಸಹಾಯ ಯಾಚನೆ ಮಾಡುತ್ತಿದ್ದುದು ಅದರ ಪ್ರಕಾರ ಅಮಲ್ ಮಾಡುವ ಮೂಲಕವಾಗಿತ್ತು." [ಜಾಮಿಉ ಬಯಾನಿಲ್ ಇಲ್ಮ್]. ಆದರೆ ಇಂದು ನಾವು ಕಾಣುತ್ತಿರುವಂತೆ ನಮ್ಮಲ್ಲಿ ಕೆಲವರು ಇಲ್ಮ್ ಕಲಿಯುವುದು ತಮ್ಮ ಸ್ವಂತಕ್ಕಾಗಿ ಅಲ್ಲವೇ ಅಲ್ಲ. ಬದಲಾಗಿ ಇನ್ನೊಬ್ಬರಿಗೆ ಕಲಿಸುವುದಕ್ಕಾಗಿದೆ. ಇನ್ನೊಬ್ಬರಿಂದ ಅಜ್ಞಾನವನ್ನು ತೊಲಗಿಸುವುದಕ್ಕಾಗಿದೆ. ಇನ್ನೊಬ್ಬರನ್ನು ಸ್ವರ್ಗ ಪ್ರವೇಶ ಮಾಡಿಸುವುದಕ್ಕಾಗಿದೆ. ಇಂತಹವರು ಕುರ್‌ಆನ್ ಆಯತ್‌ಗಳನ್ನು ಮತ್ತು ಹದೀಸ್‌ಗಳನ್ನು ಕಂಠಪಾಠ ಮಾಡುತ್ತಾರೆ. ಆದರೆ ಆ ಆಯತ್‌ಗಳು ಮತ್ತು ಹದೀಸ್‌ಗಳು ಏನನ್ನು ಆವಶ್ಯಪಡುತ್ತದೋ ಅದನ್ನು ಕಲಿಯುವ ಅಥವಾ ಅದನ್ನು ತಮ್ಮ ಬದುಕಿನಲ್ಲಿ ಪ್ರತಿಬಿಂಬಿಸುವ ಗೋಜಿಗೆ ಇವರು ಹೋಗುವುದಿಲ್ಲ. ಬದಲಾಗಿ ಇವರು ಅವುಗಳನ್ನು ಕಂಠಪಾಠ ಮಾಡುವುದು ಇತರರಿಗೆ ಕ್ಲಾಸ್ ಮಾಡುವುದಕ್ಕಾಗಿದೆ. ಸ್ಟೇಜ್‌ಗಳನ್ನೇರಿ ಭಾಷಣ ಮಾಡುವುದಕ್ಕಾಗಿದೆ. ಖುತುಬ ಮಾಡುವುದಕ್ಕಾಗಿದೆ. ಇನ್ನು ಕೆಲವರು ಬೇರೊಬ್ಬರು ಬರೆದ ಪುಸ್ತಕದಿಂದ ಅಥವಾ ಬೇರೊಬ್ಬರು ಮಾಡಿದ ಭಾಷಣದಿಂದ ಟಿಪ್ಪಣಿಗಳನ್ನು ತಯಾರಿಸಿ ಅದನ್ನು ತಮ್ಮ ಸ್ವಂತದ್ದೆಂಬಂತೆ ಜನರ ಮುಂದೆ ಸಮರ್ಪಿಸುತ್ತಾರೆ. ಆದರೆ ಆ ಪುಸ್ತಕವನ್ನು ಕನಿಷ್ಟ ಒಂದು ಬಾರಿ ಮನಸ್ಸಾನಿಧ್ಯದೊಂದಿಗೆ ಓದಿ ಅಥವಾ ಭಾಷಣವನ್ನು ಮನಸ್ಸಾನಿಧ್ಯದೊಂದಿಗೆ ಕೇಳಿ ಅದು ತಮ್ಮಿಂದ ಏನನ್ನು ಆವಶ್ಯಪಡುತ್ತದೆ ಎಂಬುದನ್ನು ಅರಿಯುವ ಅಥವಾ ಅರಿತರೂ ಅದನ್ನು ತಮ್ಮ ಜೀವನದಲ್ಲಿ ಅಳವಡಿಸುವ ಬಗ್ಗೆ ಇವರು ಚಿಂತಿತರಲ್ಲ. ಆದರೆ ವಿಪರ್ಯಾಸವೇನೆಂದರೆ ಇಂತಹವರನ್ನು ಜನರು ಆಲಿಮ್‌ಗಳೆಂದು ಕರೆಯುತ್ತಾರೆ ಮತ್ತು ಅವರೊಂದಿಗೆ ಫತ್ವಾ ಕೇಳುತ್ತಾರೆ. ಇಂತಹವರ ಬಗ್ಗೆ ಪ್ರವಾದಿ(ﷺ)ರವರ ಕೆಲವು ಹದೀಸ್‌ಗಳನ್ನು ನೋಡಿ:

«لَا تَزُولُ قَدَمُ ابْنِ آدَمَ يَوْمَ الْقِيَامَةِ مِنْ عِنْدِ رَبِّهِ حَتَّى يُسْأَلَ عَنْ خَمْسٍ عَنْ عُمُرِهِ فِيمَ أَفْنَاهُ وَعَنْ شَبَابِهِ فِيمَ أَبْلَاهُ وَمَالِهِ مِنْ أَيْنَ اكْتَسَبَهُ وَفِيمَ أَنْفَقَهُ وَمَاذَا عَمِلَ فِيمَا عَلِمَ»

"ಐದು ವಿಷಯಗಳಿಗೆ ಉತ್ತರ ಕೊಡುವ ತನಕ ಮನುಷ್ಯನ ಪಾದವು ಅವನ ರಬ್ಬ್‌ನ ಬಳಿಯಿಂದ ಕದಲಲಾರದು. 1. ಅವನ ಆಯುಷ್ಯದ ಬಗ್ಗೆ, ಅದನ್ನು ಅವನು ಯಾವುದರಲ್ಲಿ ಮುಗಿಸಿದನು. 2. ಅವನ ಯೌವನದ ಬಗ್ಗೆ, ಅದನ್ನು ಅವನು ಯಾವುದರಲ್ಲಿ ವ್ಯಯಿಸಿದನು. 3. ಅವನ ಸಂಪತ್ತಿನ ಬಗ್ಗೆ, ಅದನ್ನು ಅವನು ಎಲ್ಲಿಂದ ಸಂಪಾದಿಸಿದನು. 4. ಅದನ್ನು ಅವನು ಯಾವುದರಲ್ಲಿ ವ್ಯಯಿಸಿದನು. 5. ಅವನು ತಾನು ಕಲಿತ ಇಲ್ಮ್‌ನಿಂದ ಏನು ಅಮಲ್ ಮಾಡಿದನು." [ಸುನನು ತ್ತಿರ್ಮಿದಿ]

«إِنَّ أَخْوَفَ مَا أَخَافُ عَلَى أُمَّتِي كُلُّ مُنَافِقٍ عَلِيمِ اللِّسَانِ»

"ನಾನು ನನ್ನ ಉಮ್ಮತ್ತಿನ ಬಗ್ಗೆ ಅತಿಹೆಚ್ಚು ಭಯಪಡುವುದು ನಾಲಗೆಯ ವಿದ್ವಾಂಸರಾದ ಮುನಾಫಿಕ್‌ಗಳೆಲ್ಲರನ್ನಾಗಿದೆ." [ಅಹ್ಮದ್]

«مَرَرْتُ لَيْلَةَ أُسْرِيَ بِي عَلَى قَوْمٍ تُقْرَضُ شِفَاهُهُمْ بِمَقَارِيضَ مِنْ نَارٍ قُلْتُ مَا هَؤُلَاءِ قَالَ هَؤُلَاءِ خُطَبَاءُ أُمَّتِكَ الَّذِينَ يَقُولُونَ مَا لَا يَفْعَلُونَ وَيَقْرَأُونَ كِتَابَ اللَّهِ وَلَا يَعْمَلُونَ بِهِ»

"ಇಸ್ರಾಅ್‌ನ ರಾತ್ರಿಯಲ್ಲಿ ನಾನೊಂದು ಜನತೆಯ ಬಳಿಯಿಂದ ಹಾದು ಹೋದೆ. ಅವರ ತುಟಿಗಳನ್ನು ನರಕಾಗ್ನಿಯ ಕತ್ತರಿಗಳಿಂದ ಕತ್ತರಿಸಲಾಗುತ್ತಿತ್ತು. ನಾನು ಕೇಳಿದೆ: ಯಾರಿವರು? ಜಿಬ್ರೀಲ್(عليه السلام) ಹೇಳಿದರು: ನಿಮ್ಮ ಉಮ್ಮತ್ತಿನ ಭಾಷಣಗಾರರು. ಅವರು ತಾವು ಮಾಡದಿರುವುದನ್ನು ಹೇಳುತ್ತಿದ್ದರು. ಅವರು ಅಲ್ಲಾಹನ ಗ್ರಂಥವನ್ನು ಓದುತ್ತಿದ್ದರು. ಆದರೆ ಅದರ ಪ್ರಕಾರ ಅಮಲ್ ಮಾಡುತ್ತಿರಲಿಲ್ಲ." [ಶುಅಬುಲ್ ಈಮಾನ್ ಲಿಲ್ ಬೈಹಕೀ]

«مَثَلُ الَّذِي يُعَلِّمُ النَّاسَ الْخَيْرَ وَيَنْسَى نَفْسَهُ كَمَثَلِ السِّرَاجِ يُضِيءُ لِلنَّاسِ وَيُحْرِقُ نَفْسَهُ»

"ಜನರಿಗೆ ಒಳಿತನ್ನು ಕಲಿಸುವ ಮತ್ತು ತನ್ನನ್ನು ಮರೆತುಬಿಡುವ ವ್ಯಕ್ತಿಯ ಉದಾಹರಣೆಯು ಒಂದು ದೀಪದಂತೆ. ಅದು ಜನರಿಗೆ ಬೆಳಕನ್ನು ನೀಡುತ್ತದೆ. ಆದರೆ ಸ್ವತಃ ತನ್ನನ್ನೇ ಉರಿಸಿಬಿಡುತ್ತದೆ." [ಅತ್ತಬರಾನೀ]

ಇಂತಹ ಜನರೊಂದಿಗೆ ಸೇರಿಹೋಗದಂತೆ ನಾವು ಎಚ್ಚರವಹಿಸಬೇಕಾಗಿದೆ. ಓ ಅಲ್ಲಾಹ್! ಪ್ರಯೋಜನ ನೀಡದ ಇಲ್ಮ್, ಭಯಭಕ್ತಿಯಿಲ್ಲದ ಹೃದಯ, ತೃಪ್ತಿಪಡದ ಆತ್ಮ ಮತ್ತು ಉತ್ತರ ಸಿಗದ ಪ್ರಾರ್ಥನೆ, ಇವುಗಳಿಂದ ನಾವು ನಿನ್ನೊಂದಿಗೆ ರಕ್ಷಣೆ ಬೇಡುತ್ತಿದ್ದೇವೆ.

وصلى الله تعالى على نبينا محمد وآله وصحبه ومن اتبعه بإحسان إلى يوم الدين

# ನಿಮ್ಮ ವಿಚಾರಗಳು

ಅಸ್ಸಲಾಮು ಅಲೈಕುಮ್,

ಅಹ್ಲುಸ್ಸುನ್ನಃದ ಮಹಾನ್ ಉಲಮಾಗಳ ಭಾಷಾಂತರಗಳನ್ನು ಹೊಂದಿರುವ ನಿಮ್ಮ ಪತ್ರಿಕೆಯನ್ನು ನೋಡಿ ತುಂಬಾ ಸಂತೋಷವಾಯಿತು. ನಾನು ಅನೇಕ ವರ್ಷಗಳಿಂದ ಹುಡುಕುತ್ತಿದ್ದುದು ಇದನ್ನೇ ಆಗಿತ್ತು. ಇದೇ ನಿಜವಾದ ಮನ್‌ಹಜುಸ್ಸಲಫ್. ನಾವು ಇಲ್ಮ್ ಅನ್ನು ಪಡೆಯಬೇಕಾದುದು ಮಹಾನ್ ಉಲಮಾಗಳ ಗ್ರಂಥ ಮತ್ತು ಭಾಷಣಗಳಿಂದಾಗಿದೆ. ಅಥವಾ ನಮಗೆ ಸಾಧ್ಯವಾಗುವುದಾದರೆ ಅವರ ಕ್ಲಾಸ್‌ಗಳಲ್ಲಿ ನೇರವಾಗಿ ಕೂರುವ ಮೂಲಕವಾಗಿದೆ. ನಮ್ಮ ಉದ್ದೇಶವನ್ನು ಅಲ್ಲಾಹನಿಗಾಗಿ ನಿಷ್ಕಳಂಕಗೊಳಿಸುವಂತಾಗಲು ಮತ್ತು ನಮ್ಮಲ್ಲಿ ಯಾವುದೇ ಕೆಟ್ಟ ಉದ್ದೇಶಗಳು ಇಲ್ಲದಂತಾಗಲು ನಾನು ಅಲ್ಲಾಹನೊಂದಿಗೆ ಪ್ರಾರ್ಥಿಸುತ್ತೇನೆ. ಯಾಕೆಂದರೆ ಇದಕ್ಕೆ ಬಹಳ ಪ್ರಾಮುಖ್ಯತೆಯಿದೆ. ಒಳ್ಳೆಯ ಉದ್ದೇಶದಿಂದ ದಅ್‌ವಾ ಆರಂಭಿಸಿ ನಂತರ ನಿಧಾನವಾಗಿ ಅದು ಹಿಝ್ಬಿಯ್ಯಃ ಮತ್ತು ಗುಂಪುಗಾರಿಕೆಗೆ ತಿರುಗುವುದನ್ನು ನಾವೀಗಾಗಲೇ ಕಂಡಿದ್ದೇವೆ. ಆದರೆ ನಮ್ಮಲ್ಲಿ ಇದು ಸಂಭವಿಸಬಾರದು. ಇದಕ್ಕಿರುವ ಒಂದೇ ಒಂದು ಪರಿಹಾರವೇನೆಂದರೆ ನಮ್ಮ ದಅ್‌ವಾ ಅಥವಾ ಇತರ ಯಾವುದೇ ಸತ್ಕರ್ಮಗಳ ಉದ್ದೇಶವನ್ನು ನಾವು ಅಲ್ಲಾಹನಿಗೆ ನಿಷ್ಕಳಂಕಗೊಳಿಸುವುದು. ನಮಗೆ ಯಾವುದೇ ವಿಷಯದಲ್ಲಿ ಭಿನ್ನಾಭಿಪ್ರಾಯವುಂಟಾದರೆ ಅದನ್ನು ನಮ್ಮ ಕಾಲಘಟ್ಟದ ಕಿಬಾರುಲ್ ಉಲಮಾಗಳ ಬಳಿಗೆ ಕೊಂಡೊಯ್ಯಬೇಕು. ಕುರ್‌ಆನ್, ಸುನ್ನಃ ಮತ್ತು ಸಲಫ್‌ಗಳ ಅರ್ಥೈಸುವಿಕೆಯ ಆಧಾರದಲ್ಲಿ ಅವರು ನಮಗೆ ಪರಿಹಾರವನ್ನು ಒದಗಿಸುವರು.

ನಮಗೆ ತಿಳಿದಿರುವಂತೆ ನಮ್ಮಲ್ಲಿ ಅನೇಕ ಮಂದಿ ನಾವು ಮನ್‌ಹಜುಸ್ಸಲಫ್‌ನಲ್ಲಿದ್ದೇವೆಂದು ವಾದಿಸುತ್ತಾರೆ. ಆದರೆ ವಾಸ್ತವವಾಗಿ ಅವರು ಮನ್‌ಹಜುಸ್ಸಲಫ್‌ನಿಂದ ಬಹುದೂರದಲ್ಲಿದ್ದಾರೆ. ಮಂಗಳೂರಿನಲ್ಲಿ ನಿಜವಾದ ಮನ್‌ಹಜುಸ್ಸಲಫ್ ಅನ್ನು ಪ್ರಚಾರ ಮಾಡಲು ನಾವು ಸಾಧ್ಯವಾದಷ್ಟು ಪ್ರಯತ್ನಿಸೋಣ. ವಸ್ಸಲಾಮ್,

ನಾಸಿರ್ ಹುಸೈನ್ <nazir.7@gmail.com>

ಅಸ್ಸಲಾಮು ಅಲೈಕುಮ್,

ಅಲ್‌ಹುದಾ ಚೆನ್ನಾಗಿದೆ. ಮಾಶಾ ಅಲ್ಲಾಹ್! ಹೊಸ ಹೊಸ ಮಾಹಿತಿಯನ್ನು ನೀಡಿದೆ. ಪ್ರಾಯೋಗಿಕ 1: ಪುಟ 10 ಕೊನೆಯ ಕಾಲಮ್. ಗೆಳೆತನ ಉದಾಹರಣೆಯಲ್ಲಿ ಅಕ್ಕಸಾಲಿಗ ಅಲ್ಲ, ಕಮ್ಮಾರ ಎಂದಾಗಬೇಕಲ್ಲವೇ? ಕಬ್ಬಿಣದ ಕೆಲಸ ಮಾಡುವಾತ.

ಯಾಕೂಬ್ ಕಲ್ಲರ್ಪೆ

ಹೌದು! ಹದೀಸ್‌ನಲ್ಲಿ ಬಂದ ಅಲ್‌ಹದ್ದಾದ್ (الحداد) ಎಂಬ ಪದದ ಅರ್ಥ ಕಬ್ಬಿಣದ ಕೆಲಸ ಮಾಡುವವನು ಅಥವಾ ಕಮ್ಮಾರ ಎಂದಾಗಿದೆ. ತಪ್ಪನ್ನು ತಿದ್ದಿರುವುದಕ್ಕೆ ದನ್ಯವಾದಗಳು. ಜಝಾಕಲ್ಲಾಹು ಖೈರನ್. –ಸಂ.

ಅಸ್ಸಲಾಮು ಅಲೈಕುಮ್,

ಅಲ್‌ಹುದಾ ಪತ್ರಿಕೆಯು ಚೆನ್ನಾಗಿ ಮೂಡಿ ಬರುತ್ತಿದೆ. ಇದರಲ್ಲಿ ಪ್ರವಾದಿ(ﷺ)ರವರ ಜೀವನಚರಿತ್ರೆಯನ್ನು ಧಾರವಾಹಿ ಮೂಲಕ ಹಾಕಿದರೆ ಇನ್ನೂ ಚೆನ್ನಾಗಿ ಇರಬಹುದು ಎನ್ನುವುದು ನನ್ನ ಅನಿಸಿಕೆ. ಏಕೆಂದರೆ ನಬಿ(ﷺ)ರವರ ಹದೀಸ್ ಗೊತ್ತಿರುತ್ತೆ. ಆದರೆ ಜೀವನ ಚರಿತ್ರೆಯು ಯಾರಿಗೂ ಗೊತ್ತಿರಲ್ಲ. ಆದ್ದರಿಂದ ಸಂಪಾದಕರೇ, ನಬಿ(ﷺ)ರವರ ಜೀವನ ಚರಿತ್ರೆಯನ್ನು ಧಾರವಾಹಿ ಮೂಲಕ ಪ್ರಕಟಿಸಿ ಎಂದು ವಿನಂತಿಸುವ

ಮುಹಮ್ಮದ್ ಮನ್ಸೂರ್, ಬೊಳ್ವಾಯಿ

# ಆಲಿಮ್ ಎಂದು ಯಾರನ್ನು ಕರೆಯಬಹುದು?

ಅಶ್ಶೈಖ್ ಮುಹಮ್ಮದ್ ಸಾಲಿಹ್ ಅಲ್‌ಮುನಜ್ಜಿದ್

ಎರಡಕ್ಷರ ಅರಬಿ ಕಲಿತವರನ್ನು, ಅಥವಾ ಕುರ್‌ಆನ್ ವ್ಯಾಖ್ಯಾನ ಓದಿದವರನ್ನು, ಅಥವಾ ನಾಲ್ಕು ಹದೀಸ್ ಕಂಠಪಾಠ ಮಾಡಿದವರನ್ನು, ಅಥವಾ ವೇದಿಕೆಯೇರಿ ಭಾಷಣ ಮಾಡುವವರನ್ನು, ಅಥವಾ ಪತ್ರಿಕೆಗಳಲ್ಲಿ ಬರೆಯುವವರನ್ನು ಇತ್ಯಾದಿ ಇಂದು ಆಲಿಮ್‌ಗಳೆಂದು ಕರೆಯಲಾಗುತ್ತದೆ. ಜನರು ತಮ್ಮನ್ನು ಆಲಿಮ್ ಎಂದು ಕರೆಯುವುದನ್ನು ಇಂತಹ ಮಂದಿ ಕೂಡ ವಿರೋಧಿಸುವುದಿಲ್ಲವಾದ್ದರಿಂದ ಸ್ವಾಭಾವಿಕವಾಗಿಯೂ ಜನರು ಶರೀಅತ್ತಿಗೆ ಸಂಬಂಧಿಸಿದ ವಿಷಯಗಳಲ್ಲಿ ಅವರೊಂದಿಗೆ ಫತ್ವಾ ಕೇಳುತ್ತಾರೆ. ಆಗ ಇವರು ತಮ್ಮ ಅರಿವಿನ ಮಟ್ಟವನ್ನು ಮೀರಿ ಫತ್ವಾ ನೀಡುತ್ತಾರೆ. ಜನರು ತಮ್ಮನ್ನು ಆಲಿಮ್ ಎಂದು ಕರೆಯುವುದರಿಂದ ತಮಗೆ ಈ ವಿಷಯದಲ್ಲಿ ಅರಿವಿಲ್ಲವೆಂದು ಹೇಳುವುದು ಅವಮಾನವೆಂದು ಭಾವಿಸಿ ತಮಗೆ ತೀರಾ ಅರಿವಿಲ್ಲದ ಸೂಕ್ಷ್ಮ ವಿಷಯಗಳಲ್ಲೂ ಅವರು ಲೀಲಾಜಾಲವಾಗಿ ಮಾತನಾಡುತ್ತಾರೆ. ಇದರಿಂದ ಅವರು ಸ್ವತಃ ಪಥಭ್ರಷ್ಟರಾಗುವುದಲ್ಲದೆ ಸಮುದಾಯವನ್ನೂ ಪಥಭ್ರಷ್ಟಗೊಳಿಸುತ್ತಾರೆ. ಈ ವಿಷಯದಲ್ಲಿ ತಮ್ಮನ್ನು ಆಲಿಮ್ ಎಂದು ಪರಿಗಣಿಸುವವರ ಪ್ರಮಾದವು ಎಷ್ಟು ದೊಡ್ಡದಾಗಿದೆಯೋ ಅಷ್ಟೇ ದೊಡ್ಡ ಪ್ರಮಾದವು ಜನರದ್ದೂ ಆಗಿದೆ. ಯಾಕೆಂದರೆ ಆಲಿಮ್ ಆಗಲು ಒಬ್ಬ ವ್ಯಕ್ತಿಗಿರಬೇಕಾದ ನಿಬಂಧನೆಗಳೇನು ಎಂಬುದನ್ನು ಜನರು ಸರಿಯಾಗಿ ಅರಿತು ಆ ನಿಬಂಧನೆಗಳು ಯಾರಲ್ಲಿ ನೆರವೇರುತ್ತದೋ ಅವನನ್ನು ಮಾತ್ರ ಆಲಿಮ್ ಎಂದು ಕರೆಯಬೇಕಾಗಿದೆ ಮತ್ತು ಅವನೊಂದಿಗೆ ಮಾತ್ರ ಫತ್ವಾ ಕೇಳಬೇಕಾಗಿದೆ. –ಸಂ.

ಆಲಿಮ್, ಫಕೀಹ್, ಮುಜ್ತಹಿದ್ ಇತ್ಯಾದಿಗಳೆಲ್ಲವೂ ಒಂದೇ ಅರ್ಥವನ್ನು ಸೂಚಿಸುವ ಪರ್ಯಾಯ ಪದಗಳಾಗಿವೆ. ಆಲಿಮ್ ಎಂದರೆ ಶರಈ ನಿಯಮಗಳನ್ನು ತಲುಪುವುದಕ್ಕಾಗಿ ಪರಿಶ್ರಮಿಸುವವನು ಮತ್ತು ಶರಈ ಪುರಾವೆಗಳಿಂದ ಶರಈ ನಿಯಮಗಳನ್ನು ಸಂಶೋಧಿಸುವ ಸಾಮರ್ಥ್ಯವನ್ನು ಹೊಂದಿದವನಾಗಿದ್ದಾನೆ.

ಇದಕ್ಕಾಗಿ ಅವನು ಇಜ್ತಿಹಾದ್‌ನ ಉಪಕರಣಗಳನ್ನು (ಪೂರ್ವಶರತ್ತುಗಳನ್ನು) ಪಡೆದಿರಬೇಕಾದುದು ಅತ್ಯಾವಶ್ಯಕವಾಗಿದೆ. ಆದ್ದರಿಂದ ಯಾರಲ್ಲಿ ಇಜ್ತಿಹಾದಿನ ನಿಬಂಧನೆಗಳು ನೆರವೇರುತ್ತದೋ ಅವನ ಹೊರತು ಬೇರೆ ಯಾರನ್ನೂ ಆಲಿಮ್, ಫಕೀಹ್ ಅಥವಾ ಮುಜ್ತಹಿದ್ ಎಂಬ ವಿಶೇಷಣಗಳನ್ನು ಬಳಸಿ ಕರೆಯಬಾರದು.

ಅಲ್ಲಾಹನ ಧರ್ಮದ ಬಗ್ಗೆ ಅರಿವಿಲ್ಲದೆ ಮಾತನಾಡಲು ಹಿರಿಯರು, ಕಿರಿಯರು ಸೇರಿದಂತೆ ಎಲ್ಲರಿಗೂ ದ್ವಾರವು ಮುಕ್ತವಾಗಿ ತೆರೆಯದಿರುವುದಕ್ಕಾಗಿ ವಿದ್ವಾಂಸರು ಈ ನಿಬಂಧನೆಗಳಿಗೆ ಅತೀವ ಪ್ರಾಮುಖ್ಯತೆಯನ್ನು ಕಲ್ಪಿಸಿದ್ದಾರೆ.

ಈ ನಿಬಂಧನೆಗಳನ್ನು ವಿವರಿಸುವುದಕ್ಕಾಗಿ ನಾವಿಲ್ಲಿ (ಇಬ್ಬರು ವಿದ್ವಾಂಸರು ನೀಡಿದ ನಿಬಂಧನೆಗಳನ್ನು ಹೊಂದಿರುವ) ಎರಡು ವರದಿಗಳನ್ನು ಉದ್ಧರಿಸುತ್ತಿದ್ದೇವೆ.

ಮೊದಲನೆಯದು ಅಶ್ಶೌಕಾನಿ(ﷺ)ರವರ ನಿಬಂಧನೆಗಳು. ಅವರ ನಿಬಂಧನೆಗಳನ್ನು ಹೀಗೆ ಸಂಕ್ಷೇಪಿಸಬಹುದು.

1. ಕುರ್‌ಆನ್ ಮತ್ತು ಸುನ್ನತ್ತಿನ ಸ್ಪಷ್ಟ ವಚನಗಳ (ನಸ್ಸ್) ಬಗ್ಗೆ ಅವನು ಅರಿವನ್ನು ಹೊಂದಿರಬೇಕು.

ಆದರೆ ಇದಕ್ಕಾಗಿ ಸುನ್ನತ್ತನ್ನು ಕಂಠಪಾಠ ಮಾಡಬೇಕೆಂಬ ನಿಬಂಧನೆಯಿಲ್ಲ. ಬದಲಾಗಿ, ಸುನ್ನತ್ತನ್ನು ಅದರ ಸ್ಥಳದಿಂದ ಹೆಕ್ಕಿ ತೆಗೆಯುವುದರಲ್ಲಿ ಮತ್ತು ಸುನ್ನತ್ತಿನ ಪ್ರಸಿದ್ಧ ಕ್ರೋಢೀಕರಣ ಗ್ರಂಥಗಳಾದ ಸಹೀಹುಲ್ ಬುಖಾರಿ, ಸಹೀಹ್ ಮುಸ್ಲಿಮ್, ಸುನನ್ ಅಬೀದಾವೂದ್, ಸುನನು ತ್ತಿರ್ಮಿದಿ, ಸುನನು ನ್ನಸಾಈ, ಸುನನ್ ಇಬ್ನ್ ಮಾಜಗಳಲ್ಲಿರುವ ಹದೀಸ್‌ಗಳಲ್ಲಿ ಮತ್ತು ಅವುಗಳೊಂದಿಗೆ ಸಂಬಂಧ ಹೊಂದಿರುವ ಹದೀಸ್‌ಗಳಲ್ಲಿ ಅವನು ಪಳಗಿದವನಾಗಿರಬೇಕು.

ಅದೇ ರೀತಿ ಅವುಗಳಲ್ಲಿರುವ ಸಹೀಹ್ ಮತ್ತು ದಈಫ್ ಹದೀಸ್‌ಗಳ ಬಗ್ಗೆ ಅವನು ಅರಿವನ್ನು ಹೊಂದಿರಬೇಕು.

2. ವಿದ್ವಾಂಸರು ಏಕಾಭಿಪ್ರಾಯ (ಇಜ್ಮಾಅ್) ಹೊಂದಿರುವ ವಿಷಯಗಳ ಬಗ್ಗೆ ಅವನು ಅರಿವನ್ನು ಹೊಂದಿರಬೇಕು.

3. ಅರಬಿ ಭಾಷೆಯ ಬಗ್ಗೆ ಅವನು ಅರಿವನ್ನು ಹೊಂದಿರಬೇಕು.

ಆದರೆ ಅರಬಿ ಭಾಷೆಯನ್ನು ಸಂಪೂರ್ಣವಾಗಿ ಕಂಠಪಾಠ ಮಾಡಿರಬೇಕೆಂಬ ನಿಬಂಧನೆಯಿಲ್ಲ. ಆದರೆ ಭಾಷಿಕ ಅರ್ಥ ಮತ್ತು ಭಾಷಾ ರಚನೆಗಳ (ತರ್ಕೀಬ್) ಬಗ್ಗೆ ಅವನು ಅರಿವನ್ನು ಹೊಂದಿರಬೇಕು.

4. ಫಿಕ್‌ಹ್‌ನ ಮೂಲ ನಿಯಮಗಳ (ಉಸೂಲುಲ್ ಫಿಕ್‌ಹ್) ಬಗ್ಗೆ ಅವನು ಅರಿವನ್ನು ಹೊಂದಿರಬೇಕು. ಕಿಯಾಸ್ (ಹೋಲಿಕೆ)ನ ಬಗ್ಗೆ ಕೂಡ. ಯಾಕೆಂದರೆ ನಿಯಮಗಳ ಸಂಶೋಧನೆಗಳನ್ನು ಉಸೂಲುಲ್ ಫಿಕ್‌ಹ್ ಎಂಬ ಅಡಿಪಾಯದ ಮೇಲೆ ನಿರ್ಮಿಸಲಾಗುತ್ತದೆ.

5. ನಾಸಿಖ್ ಮತ್ತು ಮನ್ಸೂಖ್‌ಗಳ (ರದ್ದುಪಡಿಸುವಂತದ್ದು ಮತ್ತು ರದ್ದುಪಡಿಸಲಾದದ್ದು) ಬಗ್ಗೆ ಅವನು ಅರಿವನ್ನು ಹೊಂದಿರಬೇಕು.

[ನೋಡಿ: ಇರ್ಶಾದುಲ್ ಫುಹೂಲ್ 2/297–303]

ಎರಡನೆಯದು ಅಶ್ಶೈಖ್ ಮುಹಮ್ಮದ್ ಇಬ್ನ್ ಉಸೈಮೀನ್(ﷺ)ರವರ ನಿಬಂಧನೆಗಳು.

ಇವರು ನೀಡುವ ನಿಬಂಧನೆಗಳು ಅಶ್ಶೌಕಾನೀ(ﷺ) ನೀಡಿದ ನಿಬಂಧನೆಗಳಿಗಿಂತ ದೊಡ್ಡ ವ್ಯತ್ಯಾಸವನ್ನು ಹೊಂದಿಲ್ಲ. ಆದರೆ ಇವರ ವಿವರಣೆಯು ಅತ್ಯಂತ ಸರಳವಾಗಿದೆ.

ಅಶ್ಶೈಖ್ ಅಲ್‌ಉಸೈಮೀನ್(ﷺ) ಹೇಳುತ್ತಾರೆ: ಇಜ್ತಿಹಾದ್‌ಗೆ ಕೆಲವು ನಿಬಂಧನೆಗಳಿವೆ. ಅವು:

1. ಶರಈ ಪುರಾವೆಗಳ ಪೈಕಿ ತನ್ನ ಇಜ್ತಿಹಾದ್‌ಗೆ ಆವಶ್ಯಕವಾಗಿರುವುದನ್ನು ಅವನು ಅರಿತಿರಬೇಕು. ಉದಾ: ನಿಯಮಗಳನ್ನು ಹೊಂದಿರುವ ಆಯತ್‌ಗಳು ಮತ್ತು ಹದೀಸ್‌ಗಳು.

2. ಹದೀಸೊಂದನ್ನು ಸಹೀಹ್ ಅಥವಾ ದಈಫ್ ಎನ್ನಲು ಅವಲಂಬಿಸುವ ನಿಯಮಗಳನ್ನು ಅವನು ಅರಿತಿರಬೇಕು. ಉದಾ: ಸನದ್ ಮತ್ತು ರಿಜಾಲ್‌ಗಳ (ವರದಿಗಾರರು) ಬಗ್ಗೆಯಿರುವ ಜ್ಞಾನ ಇತ್ಯಾದಿ.

3. ನಾಸಿಖ್ ಮತ್ತು ಮನ್ಸೂಖ್‌ಗಳ ಹಾಗೂ ಇಜ್ಮಾಅ್ (ಒಮ್ಮತಾಭಿಪ್ರಾಯ) ಇರುವ ವಿಷಯಗಳ ಬಗ್ಗೆ ಅರಿವನ್ನು ಹೊಂದಿರಬೇಕು. ಯಾಕೆಂದರೆ ಮನ್ಸೂಖನ್ನು (ರದ್ದುಗೊಳಿಸಲಾಗಿರುವುದನ್ನು) ಅವಲಂಬಿಸಿ ಅಥವಾ ಇಜ್ಮಾಅ್‌ಗೆ ವಿರುದ್ಧವಾಗಿ ಅವನು ವಿಧಿ ನೀಡುವಂತಾಗಬಾರದು.

4. ಪುರಾವೆಗಳನ್ನು ಅವಲಂಬಿಸಿ ವಿಧಿಯು ಬದಲಾವಣೆಯಾಗುವುದರ ಬಗ್ಗೆ, ಅಂದರೆ ನಿರ್ದಿಷ್ಟ ಅರ್ಥವನ್ನು ಸೂಚಿಸುವ (ತಖ್ಸೀಸ್) ಅಥವಾ ನಿರ್ದಿಷ್ಟ ಮಿತಿಯನ್ನು ಹೊಂದಿರುವ (ತಕ್ಯೀದ್) ವರದಿಗಳ ಬಗ್ಗೆ ಅವನು ಅರಿವನ್ನು ಹೊಂದಿರಬೇಕು. ಯಾಕೆಂದರೆ ಇದಕ್ಕೆ ವಿರುದ್ಧವಾಗಿ ಅವನು ವಿಧಿ ನೀಡುವಂತಾಗಬಾರದು.

5. ಅರಬಿ ಭಾಷೆಯ ಬಗ್ಗೆ ಮತ್ತು ಆಮ್ಮ್ (ಸಾರ್ವತ್ರಿಕ), ಖಾಸ್ಸ್ (ವಿಶಿಷ್ಟ), ಮುತ್ಲಕ್ (ಅನಿರ್ಬಂಧಿತ), ಮುಕಯ್ಯದ್ (ನಿರ್ಬಂಧಿತ), ಮುಜ್ಮಲ್ (ಸಂಕ್ಷಿಪ್ತ), ಮುಬಯ್ಯನ್ (ವಿವರಣಾತ್ಮಕ) ಮೊದಲಾದ ಭಾಷಿಕ ಪ್ರಯೋಗಗಳಿಗೆ ಸಂಬಂಧಿಸಿದ ಫಿಕ್‌ಹ್‌ನ ಮೂಲ ನಿಯಮಗಳ ಬಗ್ಗೆ ಅರಿವನ್ನು ಹೊಂದಿರಬೇಕು. ಯಾಕೆಂದರೆ ಅವನು ವಿಧಿ ನೀಡುವುದು ಈ ಪ್ರಯೋಗಗಳು ಏನನ್ನು ಆವಶ್ಯಪಡುತ್ತದೋ ಅದಕ್ಕೆ ಅನುಗುಣವಾಗಿರಬೇಕಾಗಿದೆ.

6. ನಿಯಮಗಳ ಪುರಾವೆಗಳಿಂದ ನಿಯಮಗಳನ್ನು ಸಂಶೋಧನೆ ಮಾಡಲು ಸಾಧ್ಯವಿರುವಂತಹ ಸಾಮರ್ಥ್ಯವು ಅವನಿಗಿರಬೇಕು.

[ಅಲ್‌ಉಸೂಲ್ ಮಿನ್ ಇಲ್ಮಿಲ್ ಉಸೂಲ್ ಪುಟ 85–86, ಅದರ ಶರ್ಹ್ ಪುಟ 485–595]

ಸುನ್ನತ್ತಿನ ಬಗ್ಗೆ ಹೇರಳವಾಗಿ ಗ್ರಂಥಗಳು ಲಭ್ಯವಿರುವುದರಿಂದ ಸುನ್ನತ್ತಿನೆಡೆಗೆ ಮರಳಿ ನಿಯಮಗಳನ್ನು ಸಂಶೋಧಿಸಲು ಈಗ ಹಿಂದೆಂದಿಗಿಂತಲೂ ಹೆಚ್ಚು ಸುಲಭವಾಗಿದೆಯೆಂದು ಇದರ ಶರಹ್ (ವ್ಯಾಖ್ಯಾನ)ದಲ್ಲಿ ಸೂಚಿಸಲಾಗಿದೆ.

ಆದ್ದರಿಂದ ಯಾರಲ್ಲಿ ಈ ಎಲ್ಲ ನಿಬಂಧನೆಗಳು ನೆರವೇರುತ್ತದೋ ಅವನು ಆಲಿಮ್ ಆಗಿದ್ದಾನೆ. ಅಂದರೆ ಶರಈ ಪುರಾವೆಗಳಿಂದ ಶರಈ ನಿಯಮಗಳನ್ನು ಸಂಶೋಧಿಸಲು ಅವನು ಶಕ್ತನಾಗಿದ್ದಾನೆ. ಯಾರಲ್ಲಿ ಈ ಎಲ್ಲ ನಿಬಂಧನೆಗಳು ನೆರವೇರುವುದಿಲ್ಲವೋ ಅವನನ್ನು ಆಲಿಮ್, ಫಕೀಹ್ ಅಥವಾ ಮುಜ್ತಹಿದ್ ಎಂಬ ವಿಶೇಷಣಗಳನ್ನು ಬಳಸಿ ಕರೆಯಬಾರದು.

ಇಲ್ಲಿ ನಾವು ಪ್ರತ್ಯೇಕವಾಗಿ ಗಮನಹರಿಸಬೇಕಾದ ವಿಷಯವಿದೆ. ಅದೇನೆಂದರೆ ಆಲಿಮ್, ಮುಜ್ತಹಿದ್ ಅಥವಾ ಫಕೀಹ್ ಎನ್ನುವ ಈ ವಿಶೇಷಣಗಳು ಶರೀಅತ್ತಿನ ಪಾರಿಭಾಷಿಕ ಪದಗಳಾಗಿವೆ. ಉಲಮಾಗಳ ಬಳಿ ಅವುಗಳಿಗೆ ಅದರದ್ದೇ ಆದ ಅರ್ಥ ಮತ್ತು ನಿಬಂಧನೆಗಳಿವೆ. ಆದ್ದರಿಂದ ಈ ವಿಷಯದಲ್ಲಿ ನಾವು ಅಸಡ್ಡೆ ವಹಿಸಿ ಶರಈ ನಿಯಮಗಳ ಬಗ್ಗೆ ಮಾತನಾಡುವವರೆಲ್ಲರಿಗೂ, ಅಥವಾ ಮದ್ರಸ ಮತ್ತು ಜಾಮಿಅಃಗಳಲ್ಲಿ ಇಸ್ಲಾಮೀ ವಿಷಯವನ್ನು ಕಲಿತವರೆಲ್ಲರಿಗೂ, ಅಥವಾ ಅಲ್ಲಾಹನೆಡೆಗೆ ದಅ್‌ವಾ ಮಾಡುವುದರಲ್ಲಿ ಪಾಲ್ಗೊಳ್ಳುವವರೆಲ್ಲರಿಗೂ ಅನಿರ್ಬಂಧಿತವಾಗಿ ಈ ವಿಶೇಷಣಗಳನ್ನು ಬಳಸಲು (ಅಂದರೆ ಅವರನ್ನು ಆಲಿಮ್ ಎಂದು ಕರೆಯಲು) ನಮಗೆ ಅನುಮತಿಯಿಲ್ಲ. ಒಬ್ಬ ವ್ಯಕ್ತಿ ಅಲ್ಲಾಹನೆಡೆಗೆ ದಅ್‌ವಾ ಮಾಡುವವನಾಗಿರಬಹುದು. ಅದಕ್ಕಾಗಿ ಅವನು ಬಹಳ ಪರಿಶ್ರಮ ಪಡುತ್ತಿರಬಹುದು. ಆದರೂ ಅವನು ಆಲಿಮ್ ಎಂಬ ಪದವಿಗೆ ತಲುಪಲಾರನು.

ನಮಗೆ ಪ್ರಯೋಜನಕರವಾಗಿರುವುದನ್ನು ನಮಗೆ ಕಲಿಸಬೇಕೆಂದು ಮತ್ತು ನಮಗೆ ಇಲ್ಮನ್ನು ಹೆಚ್ಚಿಸಿಕೊಡಬೇಕೆಂದು ನಾವು ಅಲ್ಲಾಹನೊಂದಿಗೆ ಬೇಡುತ್ತಿದ್ದೇವೆ. ■

## ತೋರಿಕೆಯನ್ನು ಇಷ್ಟಪಡದವರು

ಸಲಫ್‌ಗಳ ಬಗ್ಗೆ ಇಬ್ರಾಹೀಮ್ ಅನ್ನಖಈ(ﷺ) ಹೇಳುತ್ತಾರೆ:

كَانُوا يَكْرَهُونَ إِذَا اجْتَمَعُوا أَنْ يُظْهِرَ الرَّجُلُ أَحْسَنَ مَا عِنْدَهُ.

“ಅವರು (ಸಲಫ್‌ಗಳು) ಒಟ್ಟು ಸೇರಿದಾಗ (ಅವರಲ್ಲೊಬ್ಬ) ವ್ಯಕ್ತಿ ತನ್ನಲ್ಲಿರುವ ಅತ್ಯುತ್ತಮವಾದುದನ್ನು ಪ್ರದರ್ಶಿಸುವುದನ್ನು ಅವರು ಅಸಹ್ಯಪಡುತ್ತಿದ್ದರು.” [ಇಬ್ನ್ ಅಬಿದ್ದುನ್ಯಾ ‘ಅಲ್‌ಇಖ್ಲಾಸು ವನ್ನಿಯ್ಯಃ’ದಲ್ಲಿ ಪುಟ 50]

# ಅಲ್‌ಕವಾಇದು ಮುಸ್ಲಾ ಫೀ ಸಿಫಾತಿಲ್ಲಾಹಿ ವಅಸ್ಮಾಇಹಿಲ್ ಹುಸ್ನಾ

القواعد المثلى في صفات الله وأسمائه الحسنى

## ಅಲ್ಲಾಹನ ವಿಶೇಷಣಗಳು ಮತ್ತು ಸುಂದರ ನಾಮಗಳಿಗೆ ಸಂಬಂಧಿಸಿದ ಆದರ್ಶಪ್ರಾಯ ಮೂಲತತ್ವಗಳು

3

ಅಶ್ಶೈಖ್ ಅಲ್‌ಅಲ್ಲಾಮಾ ಮುಹಮ್ಮದ್ ಇಬ್ನ್ ಸಾಲಿಹ್ ಇಬ್ನ್ ಉಸೈಮೀನ್ (ರಹಿಮಹುಲ್ಲಾಹ್)

### ಅಲ್ಲಾಹನ ಸುಂದರ ನಾಮಗಳಿಗೆ ಸಂಬಂಧಿಸಿದ ಮೂಲತತ್ವಗಳು

**ಮೂರನೆ ಮೂಲತತ್ವ: ಅಲ್ಲಾಹನ ನಾಮಗಳು ಸಕರ್ಮಕವಾದ (ಕರ್ಮಪದವನ್ನು ಹೊಂದಿರುವ) ವಿಶೇಷಣವನ್ನು (وصف متعد) ಸೂಚಿಸಿದರೆ ಅದು ಮೂರು ವಿಷಯಗಳನ್ನು ಒಳಗೊಳ್ಳುತ್ತದೆ:**

**1. ಆ ನಾಮವನ್ನು ಅಲ್ಲಾಹನಿಗೆ ದೃಢೀಕರಿಸುವುದು.**

**2. ಆ ನಾಮವು ಒಳಗೊಂಡಿರುವ ವಿಶೇಷಣವನ್ನು ಅಲ್ಲಾಹನಿಗೆ ದೃಢೀಕರಿಸುವುದು.**

**3. ಅದರ ನಿಯಮವನ್ನು ಮತ್ತು ಅದು ಆವಶ್ಯಪಡುವುದನ್ನು ದೃಢೀಕರಿಸುವುದು.**

[ಉದಾಹರಣೆಗೆ: ಅಲ್‌ಗಫೂರ್ ಎಂಬುದು ಅಲ್ಲಾಹನ ಒಂದು ನಾಮವಾಗಿದೆ. ಇದು ಸಕರ್ಮಕ ವಿಶೇಷಣವನ್ನು ಸೂಚಿಸುತ್ತದೆ. ಆದ್ದರಿಂದ ಇದು ಮೂರು ವಿಷಯಗಳನ್ನು ಒಳಗೊಳ್ಳುತ್ತದೆ. ಮೊದಲನೆಯದಾಗಿ, ಇದು ಅಲ್‌ಗಫೂರ್ (ಅತ್ಯಧಿಕವಾಗಿ ಕ್ಷಮಿಸುವವನು) ಎಂಬ ನಾಮವನ್ನು ಅಲ್ಲಾಹನಿಗೆ ದೃಢೀಕರಿಸುತ್ತದೆ. ಎರಡನೆಯದಾಗಿ, ಈ ನಾಮವು ಒಳಗೊಂಡಿರುವ ವಿಶೇಷಣವನ್ನು, ಅಂದರೆ ಕ್ಷಮಿಸುವವನಾಗಿದ್ದಾನೆ ಎಂಬ ವಿಶೇಷಣವನ್ನು ಇದು ಅಲ್ಲಾಹನಿಗೆ ದೃಢೀಕರಿಸುತ್ತದೆ. ಮೂರನೆಯದಾಗಿ, ಕ್ಷಮಿಸುವವನು ಎಂಬುದು ಸಕರ್ಮಕ ವಿಶೇಷಣವಾಗಿರುವುದರಿಂದ ಇದಕ್ಕೊಂದು ಕರ್ಮಪದ (ಮಫ್‌ಊಲ್) ಅಂದರೆ ಕ್ಷಮಿಸಲ್ಪಟ್ಟವನು (ಮಗ್ಫೂರುನ್ ಲಹೂ) ಇರಬೇಕಾಗಿದೆ. ಆದ್ದರಿಂದ ಸೃಷ್ಟಿಗಳಲ್ಲಿ ಕೆಲವರನ್ನು ಅಲ್ಲಾಹು ಕ್ಷಮಿಸಬೇಕೆಂದು ಈ ವಿಶೇಷಣವು ಆವಶ್ಯಪಡುತ್ತದೆ ಎಂದರ್ಥ.]

**ಆದ್ದರಿಂದ ಹೆದ್ದಾರಿ ದರೋಡೆಕೋರರು ತೌಬಾ ಮಾಡಿದರೆ ಅವರ ಮೇಲೆ ಶಿಕ್ಷಾಕ್ರಮ ಕೈಗೊಳ್ಳಲಾಗದು ಎಂದು ವಿದ್ವಾಂಸರು ಇದರ ಆಧಾರದಲ್ಲಿ ಸೂಚಿಸಿದ್ದಾರೆ. ಅವರು ಇದಕ್ಕೆ ಪುರಾವೆಯಾಗಿ ಅಲ್ಲಾಹನ ಈ ವಚನವನ್ನು ತೋರಿಸುತ್ತಾರೆ:**

﴿إِلَّا ٱلَّذِينَ تَابُواْ مِن قَبۡلِ أَن تَقۡدِرُواْ عَلَيۡهِمۡۖ فَٱعۡلَمُوٓاْ أَنَّ ٱللَّهَ غَفُورٞ رَّحِيمٞ ٣٤﴾

**“ಆದರೆ, ಅವರ ಮೇಲೆ ಕ್ರಮ ಕೈಗೊಳ್ಳಲು ನಿಮಗೆ ಸಾಧ್ಯವಾಗುವುದಕ್ಕೆ ಮುಂಚಿತವಾಗಿ ಪಶ್ಚಾತ್ತಾಪಪಟ್ಟು ಮರಳಿದವರಾರೋ ಅವರು ಇದರಿಂದ ಹೊರತಾಗಿರುವರು. ಖಂಡಿತವಾಗಿಯೂ ಅಲ್ಲಾಹು ಅತ್ಯಧಿಕ ಕ್ಷಮಿಸುವವನೂ ಅಪಾರ ಕರುಣೆಯುಳ್ಳವನೂ ಆಗಿರುವನೆಂಬುದನ್ನು ಅರಿತುಕೊಳ್ಳಿರಿ.”** [ಕುರ್‌ಆನ್ 5:34]

**ಈ ಎರಡು ನಾಮಗಳು (ಅಲ್‌ಗಫೂರ್ ಮತ್ತು ಅರ್ರಹೀಮ್ ಎಂಬ ಎರಡು ನಾಮಗಳು) ಆವಶ್ಯಪಡುವುದೇನೆಂದರೆ ಅಲ್ಲಾಹು ಅವರಿಗೆ ಅವರ ಪಾಪಗಳನ್ನು ಕ್ಷಮಿಸಿದ್ದಾನೆ ಮತ್ತು ಅವರ ಮೇಲೆ ಶಿಕ್ಷಾಕ್ರಮವನ್ನು ಜರುಗಿಸದಿರುವ ಮೂಲಕ ಅವರ ಮೇಲೆ ಕರುಣೆ ತೋರಿಸಿದ್ದಾನೆ ಎಂಬುದನ್ನಾಗಿದೆ.**

[ಅಂದರೆ ಹೆದ್ದಾರಿ ದರೋಡೆಕೋರರನ್ನು ಸೆರೆಹಿಡಿದು ಅವರ ಮೇಲೆ ಶಿಕ್ಷಾಕ್ರಮ ಕೈಗೊಳ್ಳುವ ಮೊದಲೇ ಅವರು ಶರಣಾಗಿ ಪಶ್ಚಾತ್ತಾಪಪಟ್ಟರೆ ಅವರನ್ನು ಶಿಕ್ಷಿಸಬಾರದೆಂದು ಈ ಆಯತ್ತಿನ ಕೊನೆಯಲ್ಲಿರುವ ಅಲ್‌ಗಫೂರ್ ಮತ್ತು ಅರ್ರಹೀಮ್ ಎಂಬ ಅಲ್ಲಾಹನ ನಾಮಗಳು ಸೂಚಿಸುತ್ತವೆ ಎಂದರ್ಥ]

**ಇದಕ್ಕಿರುವ (ಇನ್ನೊಂದು) ಉದಾಹರಣೆ:**

ٱلسَّمِيعُ

**“ಆಲಿಸುವವನು.”**

**ಇದು ಅಸ್ಸಮೀಅ್ ಎಂಬ ನಾಮವನ್ನು ಅಲ್ಲಾಹನಿಗೆ ದೃಢೀಕರಿಸುತ್ತದೆ. ಸಮ್‌ಅ್ (ಆಲಿಸುವಿಕೆ) ಎಂಬ ವಿಶೇಷಣವನ್ನು ಅವನಿಗೆ ದೃಢೀಕರಿಸುತ್ತದೆ. ಇದರ ನಿಯಮ ಮತ್ತು ಇದು ಆವಶ್ಯಪಡುವುದನ್ನು ಅಲ್ಲಾಹನಿಗೆ ದೃಢೀಕರಿಸುತ್ತದೆ. ಅಂದರೆ ಅಲ್ಲಾಹು ರಹಸ್ಯಗಳನ್ನೂ ಗುಪ್ತ ಮಾತುಕತೆಗಳನ್ನೂ ಆಲಿಸುತ್ತಾನೆ.**

**ಅಲ್ಲಾಹು ಹೇಳುತ್ತಾನೆ:**

﴿وَٱللَّهُ يَسۡمَعُ تَحَاوُرَكُمَآۚ إِنَّ ٱللَّهَ سَمِيعُۢ بَصِيرٌ ١﴾

**“ಅಲ್ಲಾಹು ನಿಮ್ಮಿಬ್ಬರ ಸಂಭಾಷಣೆಯನ್ನು ಆಲಿಸುತ್ತಿರುವನು. ಖಂಡಿತವಾಗಿಯೂ ಅಲ್ಲಾಹು ಎಲ್ಲವನ್ನು ಆಲಿಸುವವನೂ ವೀಕ್ಷಿಸುವವನೂ ಆಗಿರುವನು.”** [ಕುರ್‌ಆನ್ 58:1]

[ಅಂದರೆ ಪ್ರವಾದಿ(ﷺ)ರವರ ಮತ್ತು ಅವರೊಂದಿಗೆ ತನ್ನ ಪತಿಯ ಬಗ್ಗೆ ಅಳಲನ್ನು ತೋಡಿಕೊಂಡ ಖೌಲಃ ಬಿನ್ತ್ ಸಅ್‌ಲಬಃ(رضي الله عنها)ರವರ ಮಧ್ಯೆ ಜರುಗಿದ ಸಂಭಾಷಣೆಯನ್ನು ಅಲ್ಲಾಹು ಆಲಿಸಬೇಕೆಂಬುದನ್ನು ಅಸ್ಸಮೀಅ್ ಎಂಬ ನಾಮವು ಆವಶ್ಯಪಡುತ್ತದೆ ಎಂದರ್ಥ.]

**ಅಲ್ಲಾಹನ ನಾಮಗಳು ಸಕರ್ಮಕವಲ್ಲದ (ಕರ್ಮಪದವನ್ನು ಹೊಂದಿರದ) ವಿಶೇಷಣವನ್ನು (وصف غير متعد) ಸೂಚಿಸಿದರೆ ಅದು ಎರಡು ವಿಷಯಗಳನ್ನು ಮಾತ್ರ ಒಳಗೊಳ್ಳುತ್ತದೆ:**

**1. ಆ ನಾಮವನ್ನು ಅಲ್ಲಾಹನಿಗೆ ದೃಢೀಕರಿಸುವುದು.**

**2. ಆ ನಾಮವು ಒಳಗೊಂಡಿರುವ ವಿಶೇಷಣವನ್ನು ಅಲ್ಲಾಹನಿಗೆ ದೃಢೀಕರಿಸುವುದು.**

**ಇದಕ್ಕಿರುವ ಉದಾಹರಣೆ:**

ٱلۡحَيُّ

**“ಬದುಕಿರುವವನು”**

**ಇದು ಅಲ್‌ಹಯ್ಯ್ ಎಂಬ ನಾಮವನ್ನು ಅಲ್ಲಾಹನಿಗೆ ದೃಢೀಕರಿಸುತ್ತದೆ ಮತ್ತು ಹಯಾತ್ (ಬದುಕು) ಎಂಬ ವಿಶೇಷಣವನ್ನು ಅವನಿಗೆ ದೃಢೀಕರಿಸುತ್ತದೆ.**

[ಅಲ್‌ಹಯ್ಯ್ ಎಂಬುದು ಅಕರ್ಮಕ ವಿಶೇಷಣವನ್ನು ಸೂಚಿಸುವುದರಿಂದ ಅದಕ್ಕೆ ಈ ಎರಡು ವಿಷಯಗಳು ಮಾತ್ರ ಬಾಧಕವಾಗುತ್ತವೆ.]

[ಮುಂದುವರಿಯುವುದು ಇನ್‌ಶಾ ಅಲ್ಲಾಹ್]

## .....ದಅ್‌ವಾ ಮಾಡಬಹುದೇ?

ಮೊದಲನೇ ಪುಟದಿಂದ

**ವಿಷಯಗಳನ್ನು ಅವುಗಳ ಸ್ಥಾನದಲ್ಲಿಡುವುದಾಗಿದೆ. ಅಂದರೆ ಅರಿವಿಲ್ಲದವನೊಂದಿಗೆ ಅವನಿಗೆ ಅರ್ಥವಾಗುವ ಶೈಲಿಯಲ್ಲಿ ಮಾತನಾಡುವುದಾಗಿದೆ. ಅರಿವುಳ್ಳವನೊಂದಿಗೆ ಅವನಿಗೆ ಅರ್ಥವಾಗುವ ಶೈಲಿಯಲ್ಲಿ ಮಾತನಾಡುವುದಾಗಿದೆ. ಅಧಿಕಾರಿಯೊಂದಿಗೆ ಅವನಿಗೆ ಹೊಂದಾಣಿಕೆಯಾಗುವ ಶೈಲಿಯಲ್ಲಿ ಮಾತನಾಡುವುದಾಗಿದೆ. ಇದಾಗಿದೆ ಹಿಕ್ಮತ್. ಹಿಕ್ಮತ್ ಎಂಬುದಕ್ಕೆ ಇಲ್ಮ್ ಎಂಬ ಅರ್ಥವೂ ಇದೆ. ಆದ್ದರಿಂದ ನಿನಗೆ ಇಲ್ಮ್ ಇಲ್ಲದಿದ್ದರೆ ನೀನು ದಅ್‌ವಾ ಮಾಡಬಾರದು.**

**ಸುಂದರವಾದ ಉಪದೇಶದೊಂದಿಗೆ ಹಾಗೂ ಯಾವುದು ಅತ್ಯುತ್ತಮವಾಗಿದೆಯೋ ಅದರ ಮೂಲಕ ತರ್ಕಿಸುವುದರೊಂದಿಗೆ ದಅ್‌ವಾ ಮಾಡಬೇಕಾಗಿದೆ. ನಗಿಸುವುದು ಇದರಲ್ಲಿ ಸೇರುವುದಿಲ್ಲ. ಹಾಸ್ಯ ಮಾಡುವುದು ದಅ್‌ವಾ ಮಾಡುವ ವಿಧಾನಗಳಲ್ಲಿ ಸೇರಿದ್ದೆಂದು ಎಲ್ಲೂ ಹೇಳಲಾಗಿಲ್ಲ. ಇದು ದಅ್‌ವಾದ ಪ್ರಾಮುಖ್ಯತೆಯನ್ನು ಕುಗ್ಗಿಸುತ್ತದೆ. ದಅ್‌ವಾ ಮಾಡುವವನ ಪ್ರಾಮುಖ್ಯತೆಯನ್ನೂ ಕುಗ್ಗಿಸುತ್ತದೆ. ಅವನು ಜನರ ಮಧ್ಯೆ ಕೀಳಾಗುತ್ತಾನೆ. ಯಾಕೆಂದರೆ ಅವನು ನಾಚಿಕೆಯಿಲ್ಲದವನು ಮತ್ತು ಅರೋಚಕನಾಗಿದ್ದಾನೆ. ಆದ್ದರಿಂದ ದಅ್‌ವಾದ ಮನ್‌ಹಜ್‌ನಲ್ಲಿಲ್ಲದ ವಿಷಯಗಳನ್ನು ನಾವು ಅದರಲ್ಲಿ ಹೊಸದಾಗಿ ಸೇರಿಸಬಾರದು.** ■

## ವುದೂ ನಿರ್ವಹಿಸಿ ಮಲಗುವುದರ ಶ್ರೇಷ್ಠತೆಗಳು

عَنِ ابْنِ عُمَرَ رَضِيَ اللَّهُ عَنْهُ قَالَ: قَالَ رَسُولُ اللَّهِ صَلَّى اللَّهُ عَلَيْهِ وَسَلَّمَ: «طَهِّرُوا هَذِهِ الْأَجْسَادَ طَهَّرَكُمُ اللَّهُ، فَإِنَّهُ لَيْسَ عَبْدٌ يَبِيتُ طَاهِرًا إِلَّا بَاتَ مَعَهُ مَلَكٌ فِي شِعَارِهِ، لَا يَنْقَلِبُ سَاعَةً مِنَ اللَّيْلِ إِلَّا قَالَ: اللَّهُمَّ اغْفِرْ لِعَبْدِكَ، فَإِنَّهُ بَاتَ طَاهِرًا»

**“ಇಬ್ನ್ ಉಮರ್(رضي الله عنه)ರಿಂದ. ಪ್ರವಾದಿ(ﷺ)ರವರು ಹೇಳಿದರು: (ನಿಮ್ಮ) ಈ ದೇಹಗಳನ್ನು ಶುದ್ಧೀಕರಿಸಿರಿ. ಅಲ್ಲಾಹು ನಿಮಗೆ ಶುದ್ಧೀಕರಣವನ್ನು ನೀಡಲಿ. ಯಾಕೆಂದರೆ ಯಾವುದೇ ದಾಸನೂ ಶುದ್ಧಿಯೊಂದಿಗೆ (ವುದೂವಿನೊಂದಿಗೆ) ಮಲಗಲಾರನು; ಅವನೊಂದಿಗೆ ಅವನ ಕೂದಲುಗಳಲ್ಲಿ ಒಂದು ಮಲಕ್ ಮಲಗದಿರುವ ಹೊರತು. ಅವನು ಅತ್ತಿತ್ತ ಹೊರಳಾಡುವಾಗಲೆಲ್ಲ ಆ ಮಲಕ್ ಹೇಳುವುದು: ಓ ಅಲ್ಲಾಹ್! ನಿನ್ನ ದಾಸನಿಗೆ ಕ್ಷಮಿಸು. ಯಾಕೆಂದರೆ ಅವನು ಶುದ್ಧಿಯೊಂದಿಗೆ ಮಲಗಿದ್ದಾನೆ.” [ಅತ್ತಬರಾನೀ ಅಲ್‌ಮುಅ್‌ಜಮುಲ್ ಕಬೀರ್‌ನಲ್ಲಿ (13620); ಅಲ್‌ಅಲ್ಬಾನೀ ಇದನ್ನು ಹಸನ್ ಎಂದಿದ್ದಾರೆ. ನೋಡಿ: ಸಹೀಹುಲ್ ಜಾಮಿಅ್ (3936)]**

عَنِ ابْنِ عُمَرَ رَضِيَ اللَّهُ عَنْهُ قَالَ: قَالَ رَسُولُ اللَّهِ صَلَّى اللَّهُ عَلَيْهِ وَسَلَّمَ: «مَنْ بَاتَ طَاهِرًا بَاتَ فِي شِعَارِهِ مَلَكٌ، فَلَمْ يَسْتَيْقِظْ إِلَّا قَالَ الْمَلَكُ: اللَّهُمَّ اغْفِرْ لِعَبْدِكَ فُلَانٍ، فَإِنَّهُ بَاتَ طَاهِرًا»

**“ಇಬ್ನ್ ಉಮರ್(رضي الله عنه)ರಿಂದ. ಪ್ರವಾದಿ(ﷺ)ರವರು ಹೇಳಿದರು: ಯಾರಾದರೂ ಶುದ್ಧಿಯೊಂದಿಗೆ (ವುದೂವಿನೊಂದಿಗೆ) ಮಲಗಿದರೆ ಅವನ ಕೂದಲುಗಳಲ್ಲಿ ಒಂದು ಮಲಕ್ ಮಲಗುವುದು. ಅವನು ಎಚ್ಚೆತ್ತುಕೊಳ್ಳುವಾಗ ಆ ಮಲಕ್ ಹೇಳುವುದು: ಓ ಅಲ್ಲಾಹ್! ನಿನ್ನ ಇಂತಿಂತಹ ದಾಸನಿಗೆ ಕ್ಷಮಿಸು. ಯಾಕೆಂದರೆ ಅವನು ಶುದ್ಧಿಯೊಂದಿಗೆ ಮಲಗಿದ್ದಾನೆ. [ಸಹೀಹ್ ಇಬ್ನ್ ಹಿಬ್ಬಾನ್ (1048); ಅಲ್‌ಅಲ್ಬಾನೀ ಇದನ್ನು ಹಸನ್ ಸಹೀಹ್ ಎಂದಿದ್ದಾರೆ. ನೋಡಿ: ಅತ್ತಅ್‌ಲೀಕಾತುಲ್ ಹಿಸಾನ್ 2/347]** ■

## 'ಯಾ ಇಬಾದಲ್ಲಾಹ್ ಅಈನೂನೀ' ಎಂಬ ಹದೀಸಿನಲ್ಲಿ ಶಿರ್ಕ್ ಇದೆಯೇ?

# ಸಲಫೀ ಉಲಮಾಗಳು ಏನೆನ್ನುತ್ತಾರೆ?

ವಿದ್ಯಾರ್ಥಿಗಳು, ಅಲ್‌ಜಾಮಿಅತುಲ್ ಇಸ್ಲಾಮಿಯ್ಯಃ, ಮದೀನಾ ಮುನವ್ವರಃ

[ಕಳೆದ ಸಂಚಿಕೆಯಿಂದ]

7. ಅಶ್ಶೈಖ್ ಸುಲೈಮಾನ್ ಇಬ್ನ್ ಸಹ್ಮಾನ್(﵀) ಹೇಳುತ್ತಾರೆ:

وَكُلُّ أَسَانِيدِ هَذِهِ الرِّوَايَةِ لَا تَخْلُو مِنْ مَقَالٍ، وَعَلَى تَقْدِيرِ صِحَّتِهَا فَلَيْسَ فِيهِ إِلَّا نِدَاءُ الْأَحْيَاءِ وَالطَّلَبُ مِنْهُمْ مَا يَقْدِرُ هَؤُلَاءِ الْأَحْيَاءُ عَلَيْهِ، وَذَلِكَ مِمَّا لَا يَجْحَدُهُ أَحَدٌ. فَإِنْ قِيلَ: إِنَّ عِبَادَ اللَّهِ الْمَذْكُورِينَ غَائِبُونَ وَأَنْتُمْ تَمْنَعُونَ مِنْ دُعَاءِ الْأَمْوَاتِ وَالْغَائِبِينَ. فَالْجَوَابُ أَنْ نَقُولَ: هَؤُلَاءِ لَيْسُوا بِغَائِبِينَ وَعَدَمُ رُؤْيَتِهِمْ لَا يَسْتَلْزِمُ غَيْبَتَهُمْ. فَإِنَّا لَا نَرَى الْحَفَظَةَ وَمَعَ ذَلِكَ فَهُمْ حَاضِرُونَ، وَلَا نَرَى الْجِنَّ وَمَعَ ذَلِكَ فَهُمْ حَاضِرُونَ، وَكَذَلِكَ الشَّيَاطِينُ وَالْهَوَاءُ وَنَحْوُ ذَلِكَ. فَإِنَّ عِلَّةَ الرُّؤْيَةِ لَيْسَ هُوَ الْوُجُودُ فَقَطْ. وَأَيْضًا، فَإِنَّ الْأَسْبَابَ الظَّاهِرَةَ الْعَادِيَّةَ وَلَا خِلَافَ بَيْنَ أَهْلِ الْعِلْمِ فِي جَوَازِهَا. فَلَا حُجَّةَ لَهُمْ فِي هَذَا الْحَدِيثِ وَلَا مُتَعَلَّقَ لَهُمْ بِوَجْهٍ مِنَ الْوُجُوهِ. وَاللَّهُ أَعْلَمُ.

"ಈ ವರದಿಯ (ಹದೀಸಿನ) ಯಾವುದೇ ಸನದ್ ಕೂಡ ವಿಮರ್ಶೆಯಿಂದ ಮುಕ್ತವಾಗಿಲ್ಲ. ಇದನ್ನು ಸಹೀಹ್ ಎಂದು ಪರಿಗಣಿಸಿದರೂ ಇದರಲ್ಲಿರುವುದು ಜೀವವಿರುವವರನ್ನು ಕರೆಯುವುದು ಮತ್ತು ಆ ಜೀವವಿರುವವರಿಗೆ ಸಾಮರ್ಥ್ಯವಿರುವ ವಿಷಯಗಳನ್ನು ಅವರೊಂದಿಗೆ ಬೇಡುವುದು ಮಾತ್ರವಾಗಿದೆ. ಇದನ್ನು ಯಾರೂ ನಿಷೇಧಿಸುವುದಿಲ್ಲ. ಇಲ್ಲಿ (ಹದೀಸಿನಲ್ಲಿ) ಪ್ರಸ್ತಾಪಿಸಲಾದ ಇಬಾದುಲ್ಲಾಹ್ (ಅಲ್ಲಾಹನ ದಾಸರು) ಅನುಪಸ್ಥಿತರಿರುವವರಾಗಿದ್ದಾರೆ, ಆದರೆ ನೀವು ಮೃತರನ್ನು ಮತ್ತು ಅನುಪಸ್ಥಿತಿಯಲ್ಲಿರುವವರನ್ನು ಕರೆಯುವುದನ್ನು ವಿರೋಧಿಸುತ್ತಿದ್ದೀರಿ ಎಂದು ಹೇಳಲಾದರೆ, ಅದಕ್ಕೆ ಉತ್ತರವಾಗಿ ನಾವು ಹೀಗೆನ್ನುತ್ತೇವೆ: ಇವರು ಅನುಪಸ್ಥಿತಿಯಲ್ಲಿರುವವರಲ್ಲ. ಅವರನ್ನು ಕಾಣಲಾಗುವುದಿಲ್ಲ ಎಂಬುದು ಅವರು ಅನುಪಸ್ಥಿತರಾಗಿದ್ದಾರೆ ಎಂಬುದನ್ನು ನಿರ್ಬಂಧಿಸುವುದಿಲ್ಲ. ಯಾಕೆಂದರೆ ನಾವು ಹಫಝುತ್‌ಗಳಾದ ಮಲಕ್‌ಗಳನ್ನು ಕಾಣುವುದಿಲ್ಲ. ಆದರೂ ಅವರು ಉಪಸ್ಥಿತರಿದ್ದಾರೆ. ನಾವು ಜಿನ್ನ್‌ಗಳನ್ನು ಕಾಣುವುದಿಲ್ಲ. ಆದರೂ ಅವರು ಉಪಸ್ಥಿತರಾಗಿದ್ದಾರೆ. ಅದೇ ರೀತಿ ನಾವು ಶೈತಾನರನ್ನು, ಗಾಳಿಯನ್ನು ಇತ್ಯಾದಿ (ಕಾಣುವುದಿಲ್ಲ). ಯಾಕೆಂದರೆ ದೃಷ್ಟಿಯ ಕೊರತೆಯು ಅಸ್ತಿತ್ವ ಮಾತ್ರವಲ್ಲ. ಅಷ್ಟೇ ಅಲ್ಲ, ಬಾಹ್ಯವಾದ ಸಹಜ ಮಾರ್ಗಗಳು ಸಮ್ಮತಾರ್ಹವಾಗಿದೆಯೆಂಬ ವಿಷಯದಲ್ಲಿ ವಿದ್ವಾಂಸರ ಮಧ್ಯೆ ಭಿನ್ನಾಭಿಪ್ರಾಯವಿಲ್ಲ. ಆದ್ದರಿಂದ ಈ ಹದೀಸಿನಲ್ಲಿ ಅವರಿಗೆ ಯಾವುದೇ ಪುರಾವೆಯಿಲ್ಲ. ಯಾವುದೇ ವಿಧದಲ್ಲೂ ಅವರಿಗೆ ಇದರಲ್ಲಿ ಆಧರಿಸುವಂತದ್ದಿಲ್ಲ. ಹೆಚ್ಚು ಅರಿವಿರುವವನು ಅಲ್ಲಾಹನಾಗಿದ್ದಾನೆ." [ಕಶ್ಫು ಗಯಾಹಿಬಿ ಝ್ಝುಲ್ಲಾಮ್ ಅನ್ ಔಹಾಮಿ ಜಲಾಇಲ್ ಅಫ್‌ಹಾಮ್]

8. ಅಶ್ಶೈಖ್ ಅಬ್ದುಲ್ಲಾಹ್ ಇಬ್ನ್ ಅಬ್ದಿರ್ರಹ್ಮಾನ್ ಅಬಾಬುತೈನ್(﵀) [ಮರಣ ಹಿ. 1272] ಹೇಳುತ್ತಾರೆ:

وَعَلَى تَقْدِيرِ صِحَّتِهِ فَلَيْسَ فِيهِ حُجَّةٌ لِهَذَا الْمُبْطِلِ عَلَى جَوَازِ دُعَاءِ الْأَمْوَاتِ وَالْغَائِبِينَ، لِأَنَّهُ قَالَ فِيهِ: «فَإِنَّ لِلَّهِ حَاضِرًا سَيَحْبِسُهُ» الْمَعْنَى: أَنَّ لِلَّهِ عِبَادًا لَا نَعْلَمُهُ، وَمَا يَعْلَمُ جُنُودَ رَبِّكَ إِلَّا هُوَ، قَدْ وَكَّلَهُمْ سُبْحَانَهُ بِهَذَا الْأَمْرِ. وَهَذَا يَدُلُّ عَلَى أَنَّ هَؤُلَاءِ الَّذِينَ أَمَرَ بِمُنَادَاتِهِمْ حَاضِرُونَ أَحْيَاءٌ، جَعَلَ اللَّهُ لَهُمْ قُدْرَةً عَلَى ذَلِكَ، فَمُنَادِيهِمْ يُنَادِي مَنْ يَسْمَعُ وَيَقْدِرُ عَلَى ذَلِكَ، لِقَوْلِهِ: «فَإِنَّ لِلَّهِ حَاضِرًا سَيَحْبِسُهُ». وَهَذَا كَمَا يُنَادِي الْإِنْسَانُ أَصْحَابَهُ الَّذِينَ مَعَهُ فِي السَّفَرِ أَنْ يَرُدُّوا عَلَيْهِ دَابَّتَهُ إِذَا انْفَلَتَتْ.

"ಈ ಹದೀಸನ್ನು ಸಹೀಹ್ ಎಂದು ಪರಿಗಣಿಸಿದರೂ ಮೃತರನ್ನು ಮತ್ತು ಅನುಪಸ್ಥಿತಿಯಲ್ಲಿರುವವರನ್ನು ಕರೆಯುವುದು ಸಮ್ಮತಾರ್ಹವೆನ್ನಲು ಈ ಮಿಥ್ಯವಾದಿಗೆ (ಕುಬೂರಿಗೆ) ಇದರಲ್ಲಿ ಯಾವುದೇ ಪುರಾವೆಯಿಲ್ಲ. ಯಾಕೆಂದರೆ ಈ ಹದೀಸಿನಲ್ಲಿ ಹೀಗೆನ್ನಲಾಗಿದೆ: 'ಉಪಸ್ಥಿತಿಯಲ್ಲಿರುವ (ದಾಸರು) ಅಲ್ಲಾಹನಿಗಿದ್ದಾರೆ. ಅವರು ಅದನ್ನು ತಡೆಹಿಡಿಯುವರು.' ಇದರರ್ಥ ನಾವು ಅರಿತಿರದಂತಹ ಅನೇಕ ದಾಸರು ಅಲ್ಲಾಹನಿಗಿದ್ದಾರೆ. ನಿನ್ನ ರಬ್ಬ್‌ನ ಸೈನ್ಯವನ್ನು ಅವನ ಹೊರತು ಯಾರೂ ಅರಿಯಲಾರರು. ಅಲ್ಲಾಹು ಅವರಿಗೆ ಈ ವಿಷಯವನ್ನು ವಹಿಸಿಕೊಟ್ಟಿರುವನು. ಆದ್ದರಿಂದ ಯಾರನ್ನು ಕರೆಯಲು ಆಜ್ಞಾಪಿಸಲಾಗಿದೆಯೋ ಅವರು ಉಪಸ್ಥಿತಿಯಲ್ಲಿರುವವರೂ ಜೀವವಿರುವವರೂ ಆಗಿದ್ದಾರೆಂಬುದನ್ನು ಇದು ಸೂಚಿಸುತ್ತದೆ. ಆದ್ದರಿಂದ ಅವರನ್ನು ಕರೆಯುವವನು ಕರೆಯುತ್ತಿರುವುದು ಅವನ (ಕರೆಯನ್ನು) ಕೇಳುವವರು ಮತ್ತು ಅವನಿಗೆ (ಸಹಾಯ ಮಾಡಲು) ಸಾಮರ್ಥ್ಯವುಳ್ಳವರನ್ನಾಗಿದೆ. ಯಾಕೆಂದರೆ ಅದರಲ್ಲಿ ಹೀಗೆ ಹೇಳಲಾಗಿದೆ: 'ಉಪಸ್ಥಿತಿಯಲ್ಲಿರುವ (ದಾಸರು) ಅಲ್ಲಾಹನಿಗಿದ್ದಾರೆ. ಅವರು ಅದನ್ನು ತಡೆಹಿಡಿಯುವರು.' ಇದು ಒಬ್ಬ ವ್ಯಕ್ತಿ ಯಾತ್ರೆಯಲ್ಲಿರುವಾಗ ಅವನ ವಾಹನಮೃಗವು ಕಾಣೆಯಾದರೆ ಅದನ್ನು ಮರಳಿ ತರಲು ಅವನ ಜೊತೆಗಿರುವ ಸಂಗಡಿಗರನ್ನು ಕರೆಯುವಂತೆಯೇ ಆಗಿದೆ." [ತಅ್‌ಸೀಸು ತ್ತಕ್ದೀಸ್ ಫೀ ಕಶ್ಫಿ ತಲ್ಬೀಸಿ ದಾವೂದ್ ಇಬ್ನ್ ಜರ್ಜೀಸ್]

9. ಅಶ್ಶೈಖ್ ಮಹ್ಮೂದ್ ಶುಕ್ರೀ ಅಲ್‌ಆಲೂಸೀ(﵀) ಹೇಳುತ್ತಾರೆ:

فَإِنَّ مَا يُفِيدُهُ الْحَدِيثُ نِدَاءُ حَاضِرٍ كَنِدَاءِ زَيْدٍ عَمْرًا مَثَلًا، لِيُمْسِكَ دَابَّتَهُ أَوْ لِيُرْجِعَهَا أَوْ لِيُنَاوِلَهُ مَاءً أَوْ طَعَامًا أَوْ نَحْوِ ذَلِكَ. وَهَذَا مِمَّا لَا نِزَاعَ فِيهِ. غَايَةُ مَا فِي الْبَابِ أَنَّ عَمْرًا مَثَلًا مَحْسُوسٌ. وَهَؤُلَاءِ لَا يُرَوْنَ لِأَنَّهُمْ إِمَّا مُسْلِمُو الْجِنِّ أَوْ مَلَائِكَةٌ مُوَكَّلُونَ. لَا نِدَاءَ عَلَى شَيْءٍ لَا يَقْدِرُ عَلَيْهِ إِلَّا اللَّهُ تَعَالَى.

"ಈ ಹದೀಸ್ ನೀಡುವ ಮಾಹಿತಿಯು ಉಪಸ್ಥಿತಿಯಲ್ಲಿರುವ ಒಬ್ಬನನ್ನು ಕರೆಯುವುದಾಗಿದೆ. ಉದಾಹರಣೆಗೆ ಝೈದ್ ತನ್ನ ವಾಹನಮೃಗವನ್ನು ತಡೆಹಿಡಿಯಲು ಅಥವಾ ಅದನ್ನು ಮರಳಿಸಲು ಅಥವಾ ಅವನಿಗೆ ನೀರು ಅಥವಾ ಆಹಾರವನ್ನು ನೀಡಲು ಇತ್ಯಾದಿಗಳಿಗಾಗಿ ಅಮ್ರ್‌ನನ್ನು ಕರೆಯುವಂತೆಯಾಗಿದೆ. ಇದು ತರ್ಕವಿಲ್ಲದ ಒಂದು ವಿಷಯವಾಗಿದೆ. ಈ ವಿಷಯದಲ್ಲಿ ಆತ್ಯಂತಿಕವಾಗಿರುವುದೇನೆಂದರೆ ಇಲ್ಲಿ ಉದಾಹರಣೆಗೆ ಅಮ್ರ್ ಎಂಬವನು ಇಂದ್ರಿಯ ಗೋಚರನಾಗಿದ್ದಾನೆ. ಅವರು (ಹದೀಸಿನಲ್ಲಿ ಹೇಳಲಾಗಿರುವ ಅಲ್ಲಾಹನ ದಾಸರು) ಕಾಣಲ್ಪಡುವುದಿಲ್ಲವೇಕೆಂದರೆ ಅವರು ಒಂದೋ ಮುಸ್ಲಿಮ್ ಜಿನ್ನ್‌ಗಳಾಗಿರಬಹುದು ಅಥವಾ ಹೊಣೆ ವಹಿಸಲ್ಪಟ್ಟ ಮಲಕ್‌ಗಳಾಗಿರಬಹುದು. ಅಲ್ಲಾಹನಿಗೆ ಮಾತ್ರ ಸಾಮರ್ಥ್ಯವಿರುವಂತಹ ವಿಷಯಗಳಲ್ಲಿರುವ ಯಾವುದೇ ಕರೆಯೂ ಇಲ್ಲಿಲ್ಲ." [ಫತ್‌ಹುಲ್ ಮನ್ನಾನ್ ತತಿಮ್ಮತು ಮಿನ್‌ಹಾಜಿ ತ್ತಅ್‌ಸೀಸಿ ರದ್ದಿ ಸುಲ್‌ಹಿಲ್ ಇಖ್ವಾನ್]

10. ಅಲ್‌ಅಲ್ಲಾಮಾ ಝೈದ್ ಇಬ್ನ್ ಮುಹಮ್ಮದ್ ಆಲು ಸುಲೈಮಾನ್(﵀) [ಮರಣ ಹಿ. 1307] ಹೇಳುತ್ತಾರೆ:

فَهَذَا يَدُلُّ إِنْ صَحَّ عَلَى أَنَّ لِلَّهِ جُنُودًا يَسْمَعُونَ وَيَقْدِرُونَ. مَا يَعْلَمُ جُنُودَ رَبِّكَ إِلَّا هُوَ. وَرُوِيَ زِيَادَةُ لَفْظَةٍ: «فَإِنَّ لِلَّهِ حَاضِرًا» فَهَذَا صَرِيحٌ فِي أَنَّهُ يُنَادِي حَاضِرًا يَسْمَعُهُ.

"ಹದೀಸ್ ಸಹೀಹ್ ಆಗಿದ್ದರೆ, ಇದು ಸೂಚಿಸುವುದು ಆಲಿಸುವಂತಹ ಮತ್ತು ಸಾಮರ್ಥ್ಯವಿರುವಂತಹ ಸೈನ್ಯವು ಅಲ್ಲಾಹನಿಗಿದೆ ಎಂಬುದನ್ನಾಗಿದೆ. ನಿನ್ನ ರಬ್ಬ್‌ನ ಸೈನ್ಯವನ್ನು ಅವನ ಹೊರತು ಯಾರೂ ಅರಿತಿಲ್ಲ. (ಹದೀಸಿನಲ್ಲಿ) ವರದಿಯಾದ ಹೆಚ್ಚುವರಿ ಪದಗಳಲ್ಲಿ ಹೀಗಿದೆ: ಖಂಡಿತವಾಗಿಯೂ ಅಲ್ಲಾಹನಿಗೆ ಉಪಸ್ಥಿತರಿರುವ (ದಾಸರಿದ್ದಾರೆ). ಇಲ್ಲಿ ಕರೆಯುವುದು ಉಪಸ್ಥಿತರಿರುವ ಮತ್ತು ಕರೆಯನ್ನು ಆಲಿಸುವವರನ್ನಾಗಿದೆ ಎಂಬುದನ್ನು ಇದು ಸ್ಪಷ್ಟವಾಗಿ ಸೂಚಿಸುತ್ತದೆ." [ಫತ್‌ಹುಲ್ ಮನ್ನಾನ್ ಫೀ ನಕ್ದಿ ಶುಬಹಿ ದ್ದಾಲ್ಲಿ ದಹ್ಲಾನ್]

11. ಶೈಖುಲ್ ಇಸ್ಲಾಮ್ ಮುಹಮ್ಮದ್ ಇಬ್ನ್ ಅಬ್ದಿಲ್ ವಹ್ಹಾಬ್(﵀)ರವರ ಮೊಮ್ಮಗನಾದ ಅಶ್ಶೈಖ್ ಸುಲೈಮಾನ್ ಇಬ್ನು ಶೈಖ್ ಅಬ್ದಿಲ್ಲಾಹ್(﵀) [ಮರಣ ಹಿ. 1233] ಹೇಳುತ್ತಾರೆ:

وَبِتَقْدِيرِ ثُبُوتِهِ لَا دَلِيلَ فِيهِ لِأَنَّ هَذَا مِنْ دُعَاءِ الْحَاضِرِ فِيمَا يَقْدِرُ عَلَيْهِ كَمَا قَالَ: «فَإِنَّ لِلَّهِ فِي الْأَرْضِ حَاضِرًا سَيَحْبِسُهُ عَلَيْكُمْ».

"ಈ ಹದೀಸನ್ನು ದೃಢಪಟ್ಟದೆಯೆಂದು ಪರಿಗಣಿಸಿದರೂ ಇದರಲ್ಲಿ (ಮೃತರನ್ನು ಕರೆಯಲು) ಯಾವುದೇ ಪುರಾವೆಯಿಲ್ಲ. ಯಾಕೆಂದರೆ ಇದು ಉಪಸ್ಥಿತಿಯಲ್ಲಿರುವವರನ್ನು ಅವರಿಗೆ ಸಾಮರ್ಥ್ಯವಿರುವ ವಿಷಯಗಳಿಗಾಗಿ ಕರೆಯುವುದರಲ್ಲಿ ಸೇರಿದ್ದಾಗಿದೆ. ಖಂಡಿತವಾಗಿಯೂ ಭೂಮಿಯಲ್ಲಿ ಅಲ್ಲಾಹನ ಕೆಲವು ಉಪಸ್ಥಿತರಾದ (ದಾಸರಿದ್ದಾರೆ). ಅವರು ನಿಮಗಾಗಿ ಅದನ್ನು ತಡೆದಿರಿಸುವರು ಎಂದು ಹದೀಸಿನಲ್ಲಿ ಹೇಳಿರುವಂತೆ." [ತಯ್ಸೀರುಲ್ ಅಝೀಝಿಲ್ ಹಮೀದ್ ಫೀ ಶರ್ಹಿ ಕಿತಾಬಿ ತ್ತೌಹೀದ್]

[ಮುಂದುವರಿಯುವುದು ಇನ್‌ಶಾ ಅಲ್ಲಾಹ್]

## ಮನ್‌ಹಜ್‌ನಿಂದ ಪಥಭ್ರಷ್ಟಗೊಳ್ಳಲಿರುವ ಕೆಲವು ಕಾರಣಗಳು ಭಾಗ–2

# ಇಲ್ಮ್‌ನ ಶ್ರೇಷ್ಠತೆ ಮತ್ತು ಅಜ್ಞಾನಿ ಮುಫ್ತಿಗಳಿಂದುಂಟಾಗುವ ಅಪಾಯ!

ಹಿದಾಯತುಲ್ಲಾಹ್ ವೀರಕಂಭ

ಕಳೆದ ಸಂಚಿಕೆಯಲ್ಲಿ ಮನ್‌ಹಜುಸ್ಸಲಫ್‌ನಿಂದ ಪಥಭ್ರಷ್ಟರಾಗಲಿರುವ ಕಾರಣಗಳ ಪೈಕಿ ಒಂದು ಪ್ರಮುಖ ಕಾರಣವಾದ ಧರ್ಮದಲ್ಲಿ ಹದ್ದು ಮೀರುವುದರ (الغلو في الدين) ಬಗ್ಗೆ ಅತ್ಯಂತ ಚುಟುಕಾಗಿ ವಿವರಿಸಿದ್ದೆವು. ಅದೇ ರೀತಿ ಮನ್‌ಹಜುಸ್ಸಲಫ್‌ನಿಂದ ಪಥಭ್ರಷ್ಟರಾಗಲಿರುವ ಇನ್ನೊಂದು ಕಾರಣವು ಧರ್ಮದ ಬಗ್ಗೆಯಿರುವ ಅಜ್ಞಾನವಾಗಿದೆ.

ಅಜ್ಞಾನದ ಬಗ್ಗೆ ಪರಾಮರ್ಶಿಸುವ ಸಂದರ್ಭದಲ್ಲಿ ಇಲ್ಮ್‌ನ ಮಹತ್ವದ ಕುರಿತು ಪ್ರಸ್ತಾಪಿಸದಿದ್ದರೆ ಅದು ಪರಿಪೂರ್ಣವಾಗದು ಎಂಬ ಕಾರಣಕ್ಕಾಗಿ ಇಲ್ಲಿ ಇಲ್ಮ್‌ನ ಮಹತ್ವದ ಬಗ್ಗೆ ಹೇಳಲಾದ ಒಂದೆರಡು ಕುರ್‌ಆನ್ ಸೂಕ್ತಿ ಮತ್ತು ಕೆಲವು ಪ್ರವಾದಿ(ﷺ)ರವರ ಹದೀಸ್‌ಗಳನ್ನು ಮಾತ್ರವೇ ಉಲ್ಲೇಖಿಸ ಬಯಸುತ್ತೇನೆ. ಇಲ್ಮ್‌ನ ಮಹತ್ವದ ಬಗ್ಗೆ ಪೂರ್ವಿಕರೂ ಆಧುನಿಕರೂ ಆದ ಹಲವಾರು ಮಹಾನ್ ವಿದ್ವಾಂಸರು ಮಹತ್ ಗ್ರಂಥಗಳನ್ನೇ ರಚಿಸಿದ್ದಾರೆ.

ಇಸ್ಲಾಮಿನಲ್ಲಿ ಇಲ್ಮ್‌ಗಿರುವ ಸ್ಥಾನ ಅತ್ಯಂತ ಮಹತ್ತರವಾದುದಾಗಿದೆ. ಆದ್ದರಿಂದಲೇ ಇಲ್ಮ್ ಇರುವವರ ಸ್ಥಾನವೂ ಇಸ್ಲಾಮಿನಲ್ಲಿ ಅತ್ಯಂತ ಮಹತ್ತರವಾದುದಾಗಿದೆ. ಅದನ್ನು ಅಲ್ಲಾಹು ತನ್ನ ಗ್ರಂಥವಾದ ಕುರ್‌ಆನಿನಲ್ಲಿ ಈ ಕೆಳಗಿನಂತೆ ಹೇಳಿರುವನು.

﴿ يَرْفَعِ ٱللَّهُ ٱلَّذِينَ ءَامَنُوا۟ مِنكُمْ وَٱلَّذِينَ أُوتُوا۟ ٱلْعِلْمَ دَرَجَٰتٍ ﴾

“ನಿಮ್ಮ ಪೈಕಿ ವಿಶ್ವಾಸವಿಟ್ಟವರು ಮತ್ತು ಇಲ್ಮ್ ನೀಡಲಾದವರು ಯಾರೋ ಅವರನ್ನು ಅಲ್ಲಾಹು ಹಲವು ಪದವಿಗಳಿಗೆ ಏರಿಸುತ್ತಾನೆ.” [ಕುರ್‌ಆನ್ 58:11]

﴿ فَٱعْلَمْ أَنَّهُۥ لَآ إِلَٰهَ إِلَّا ٱللَّهُ وَٱسْتَغْفِرْ لِذَنۢبِكَ ﴾

“ಆದ್ದರಿಂದ ನೀನು ಅರಿತುಕೋ! ಅಲ್ಲಾಹನ ಹೊರತು ಅನ್ಯ ಆರಾಧ್ಯರಿಲ್ಲ ಎಂದು ಮತ್ತು ನಿನ್ನ ಪಾಪಕ್ಕಾಗಿ ಕ್ಷಮೆ ಬೇಡು.” [ಕುರ್‌ಆನ್ 47:19]

ಅಲ್ಲಾಹುವಿನ ಹೊರತು ಆರಾಧನೆಗೆ ನೈಜ ಹಕ್ಕುದಾರರಾಗಿ ಅನ್ಯರಿಲ್ಲ ಎಂಬುದನ್ನು ಅರಿತುಕೊಳ್ಳಲು ಆಜ್ಞಾಪಿಸುವ ಅಲ್ಲಾಹು ಕುರ್‌ಆನಿನ ಇನ್ನೊಂದು ಕಡೆ ಅದಕ್ಕೆ ಸಾಕ್ಷ್ಯ ವಹಿಸುವವರ ಬಗ್ಗೆ ಪ್ರಸ್ತಾಪಿಸುತ್ತಾ ಇಲ್ಮ್ ಇರುವವರ ಬಗ್ಗೆ ವಿಶೇಷವಾಗಿ ಪರಾಮರ್ಶಿಸುತ್ತಾ ಹೇಳುವುದನ್ನು ನೋಡಿರಿ;

﴿ شَهِدَ ٱللَّهُ أَنَّهُۥ لَآ إِلَٰهَ إِلَّا هُوَ وَٱلْمَلَٰٓئِكَةُ وَأُو۟لُوا۟ ٱلْعِلْمِ ﴾

“ಅಲ್ಲಾಹನ ಹೊರತು ಅನ್ಯ ಆರಾಧ್ಯರಿಲ್ಲವೆಂದು ಅಲ್ಲಾಹು ಸಾಕ್ಷ್ಯವಹಿಸಿದ್ದಾನೆ. ಅವನ ಮಲಕ್‌ಗಳು ಮತ್ತು ಇಲ್ಮ್ ಇರುವ ಜನರು ಕೂಡ ಸಾಕ್ಷ್ಯವಹಿಸಿದ್ದಾರೆ.” [ಕುರ್‌ಆನ್3:18]

ಇಲ್ಮ್ ಇರುವವರ ಸಾಕ್ಷ್ಯವನ್ನು ಅಲ್ಲಾಹು ತನ್ನ ಗ್ರಂಥದಲ್ಲಿ ಒಂದು ಪುರಾವೆಯೆಂಬಂತೆ ಎತ್ತಿ ಹೇಳುತ್ತಾನೆ.

ಮಾತ್ರವಲ್ಲ ಇಲ್ಮ್ ಇರುವವರನ್ನು ಪ್ರವಾದಿ (ﷺ)ರವರು ಪ್ರವಾದಿಗಳ ಉತ್ತರಾಧಿಕಾರಿಗಳಾಗಿರುವರು ಎಂದು ಕೂಡಾ ಹೇಳಿರುವರು. ಪ್ರವಾದಿ (ﷺ)ರವರ ವಚನವೊಂದನ್ನು ನೋಡಿರಿ;

«إِنَّ الْأَنْبِيَاءَ لَمْ يُوَرِّثُوا دِينَارًا وَلَا دِرْهَمًا، وَإِنَّمَا وَرَّثُوا الْعِلْمَ، فَمَنْ أَخَذَهُ أَخَذَ بِحَظٍّ وَافِرٍ»

“ಖಂಡಿತವಾಗಿಯೂ ಅಂಬಿಯಾಗಳು ದೀನಾರನ್ನಾಗಲಿ, ದಿರ್ಹಮನ್ನಾಗಲಿ ವಾರಸಾಗಿ ಬಿಟ್ಟುಹೋಗಿಲ್ಲ. ಅವರು ವಾರಸಾಗಿ ಬಿಟ್ಟು ಹೋಗಿರುವುದು ಕೇವಲ ಇಲ್ಮ್ ಅನ್ನು ಮಾತ್ರವಾಗಿದೆ. ಆದ್ದರಿಂದ ಯಾರಾದರೂ ಅದನ್ನು ಪಡೆದರೆ ಅವನು ಬಹುದೊಡ್ಡ ಪಾಲನ್ನು ಪಡೆದಿರುವನು.” [ಅಬೂದಾವೂದ್ ಮತ್ತು ಅತ್ತಿರ್ಮಿದಿ]

ಇಲ್ಮ್ ಇರುವವರ ಮಹತ್ವವನ್ನು ಅಲ್ಲಾಹುವಿನ ಸಂದೇಶವಾಹಕರು(ﷺ) ಅತ್ಯಂತ ಸುಂದರ ಉಪಮೆಯೊಂದರ ಮೂಲಕ ವಿವರಿಸುವುದನ್ನು ನೋಡಿರಿ:

«مَثَلُ مَا بَعَثَنِي اللَّهُ بِهِ مِنَ الْهُدَى وَالْعِلْمِ، كَمَثَلِ الْغَيْثِ الْكَثِيرِ أَصَابَ أَرْضًا، فَكَانَ مِنْهَا نَقِيَّةٌ قَبِلَتِ الْمَاءَ، فَأَنْبَتَتِ الْكَلَأَ وَالْعُشْبَ الْكَثِيرَ، وَكَانَتْ مِنْهَا أَجَادِبُ أَمْسَكَتِ الْمَاءَ، فَنَفَعَ اللَّهُ بِهَا النَّاسَ فَشَرِبُوا وَسَقَوْا وَزَرَعُوا، وَأَصَابَتْ مِنْهَا طَائِفَةً أُخْرَى، إِنَّمَا هِيَ قِيعَانٌ لَا تُمْسِكُ مَاءً وَلَا تُنْبِتُ كَلَأً، فَذَلِكَ مَثَلُ مَنْ فَقُهَ فِي دِينِ اللَّهِ وَنَفَعَهُ مَا بَعَثَنِي اللَّهُ بِهِ، فَعَلِمَ وَعَلَّمَ وَمَثَلُ مَنْ لَمْ يَرْفَعْ بِذَلِكَ رَأْسًا وَلَمْ يَقْبَلْ هُدَى اللَّهِ الَّذِي أُرْسِلْتُ بِهِ»

“ಮಾರ್ಗದರ್ಶನ ಮತ್ತು ಇಲ್ಮ್‌ನೊಂದಿಗೆ ಅಲ್ಲಾಹು ನನ್ನನ್ನು ಕಳುಹಿಸಿರುವುದಕ್ಕಿರುವ ಉದಾಹರಣೆ ಒಂದು ಭೂಪ್ರದೇಶದ ಮೇಲೆ ಧಾರಕಾರವಾಗಿ ಸುರಿದ ಮಳೆಯಂತಾಗಿದೆ. ಆ ಭೂಪ್ರದೇಶದ ಪೈಕಿ ಒಂದು ಭಾಗವು ಉತ್ತಮವಾಗಿತ್ತು. ಅದು ನೀರನ್ನು ಸ್ವೀಕರಿಸಿತು. ಹಾಗೆ ಅದು ಧಾರಾಳವಾಗಿ ಹುಲ್ಲು ಮತ್ತು ಸಸ್ಯಲತಾದಿಗಳನ್ನು ಬೆಳೆಸಿತು. ಆ ಭೂಭಾಗದ ಪೈಕಿ ಕೆಲವು ಬರಪೀಡಿತ ಪ್ರದೇಶಗಳು ನೀರನ್ನು ಹಿಡಿದಿಟ್ಟವು. ಹೀಗೆ ಅಲ್ಲಾಹು ಅದರಿಂದ ಜನರಿಗೆ ಪ್ರಯೋಜನವನ್ನುಂಟುಮಾಡಿದನು. ಜನರು ಅದನ್ನು ಕುಡಿದರು, ಕುಡಿಸಿದರು ಮತ್ತು ಕೃಷಿಗಳನ್ನು ಬೆಳೆಸಿದರು. ಆ ಭೂಪ್ರದೇಶದ ಪೈಕಿ ಇನ್ನೊಂದು ಭಾಗವು ಸಮತಟ್ಟಾಗಿತ್ತು. ಅದು ನೀರನ್ನು ಹಿಡಿದಿಟ್ಟುಕೊಳ್ಳಲಿಲ್ಲ ಮತ್ತು ಅದರಲ್ಲಿ ಹುಲ್ಲು ಬೆಳೆಯಲಿಲ್ಲ. ಅಲ್ಲಾಹನ ಧರ್ಮದ ಕುರಿತು ಪಾಂಡಿತ್ಯ ಹೊಂದಿರುವವನ ಉದಾಹರಣೆ ಇದಾಗಿದೆ: ಅಲ್ಲಾಹು ನನ್ನನ್ನು ಯಾವುದರೊಂದಿಗೆ ಕಳುಹಿಸಿದನೋ ಅದರಿಂದ ಅವನಿಗೆ ಪ್ರಯೋಜನವುಂಟಾಯಿತು. ಅವನು ಕಲಿತನು ಮತ್ತು ಕಲಿಸಿದನು. (ಅಲ್ಲಾಹನ ಧರ್ಮದ ಕುರಿತು ಅರಿವು ಹೊಂದಿರದವನ) ಉದಾಹರಣೆ ಇದಾಗಿದೆ: ಅವನು ಅದರೊಂದಿಗೆ ತಲೆ ಎತ್ತಲಿಲ್ಲ. ಯಾವುದರೊಂದಿಗೆ ನನ್ನನ್ನು ಕಳುಹಿಸಲಾಯಿತೋ ಅಲ್ಲಾಹನ ಆ ಮಾರ್ಗದರ್ಶನವನ್ನು ಅವನು ಸ್ವೀಕರಿಸಲಿಲ್ಲ.” [ಅಲ್‌ಬುಖಾರಿ]

ಇಲ್ಮ್ ಕಲಿಯದವನನ್ನು ಪ್ರವಾದಿ(ﷺ)ರವರು ಇಲ್ಲಿ ಅಲ್ಲಾಹುವಿನ ಮಾರ್ಗದರ್ಶನವನ್ನು ಸ್ವೀಕರಿಸದವನೊಂದಿಗೆ ಹೋಲಿಸುತ್ತಾರೆ. ನೈಜ ಮಾರ್ಗದರ್ಶನವು ಇಲ್ಮ್‌ನ ಮೂಲಕ ಮಾತ್ರ ಸಿಗುತ್ತದೆ. ಆದ್ದರಿಂದಲೇ ಇಲ್ಮ್ ಕಲಿಯುವುದನ್ನು ಇಸ್ಲಾಮ್ ಅತ್ಯಂತ ಹೆಚ್ಚು ಪ್ರೋತ್ಸಾಹಿಸಿದೆ. ಇಲ್ಮ್ ಕಲಿಯುವುದರ ಮಹತ್ವವನ್ನು ವಿವರಿಸುತ್ತಾ ಪ್ರವಾದಿ(ﷺ)ರವರು ಹೇಳಿದರು;

«مَنْ سَلَكَ طَرِيقًا يَلْتَمِسُ فِيهِ عِلْمًا سَهَّلَ اللَّهُ لَهُ بِهِ طَرِيقًا إِلَى الْجَنَّةِ»

“ಯಾರು ಇಲ್ಮ್ ಅರಸುತ್ತಾ ಒಂದು ದಾರಿಯನ್ನು ಪ್ರವೇಶಿಸುತ್ತಾನೋ ಅಲ್ಲಾಹು ಅವನಿಗೆ ಸ್ವರ್ಗದೆಡೆಗಿರುವ ದಾರಿಯನ್ನು ಸರಳಗೊಳಿಸುತ್ತಾನೆ.” [ಮುಸ್ಲಿಮ್]

ಇಲ್ಮ್ ಕಲಿಯಲು ಅವಕಾಶ ಸಿಗುವುದು ಖಂಡಿತವಾಗಿಯೂ ಅಲ್ಲಾಹನ ಮಹಾ ಅನುಗ್ರಹದಲ್ಲಿ ಸೇರಿದ್ದಾಗಿದೆ. ಅಲ್ಲಾಹು ಯಾರಿಗೆ ಒಳಿತನ್ನು ಉದ್ದೇಶಿಸುತ್ತಾನೋ ಅವನಿಗೆ ಅಲ್ಲಾಹು ಧರ್ಮದಲ್ಲಿ ಪಾಂಡಿತ್ಯವನ್ನು ನೀಡುತ್ತಾನೆ. ಪ್ರವಾದಿ(ﷺ)ರವರು ಹೇಳುತ್ತಾರೆ;

«مَنْ يُرِدِ اللَّهُ بِهِ خَيْرًا يُفَقِّهْهُ فِي الدِّينِ»

“ಅಲ್ಲಾಹು ಯಾರಲ್ಲಿ ಒಳಿತನ್ನು ಉದ್ದೇಶಿಸುತ್ತಾನೋ ಅವನಿಗೆ ಧರ್ಮದಲ್ಲಿ ಪಾಂಡಿತ್ಯವನ್ನು ನೀಡುತ್ತಾನೆ.”

ಆದ್ದರಿಂದ ತನ್ನಲ್ಲಿರುವ ಅಜ್ಞಾನವನ್ನು ನೀಗಿಸಿ ಜ್ಞಾನವನ್ನು ಪಡೆಯಲು ಪ್ರತಿಯೊರ್ವನೂ ಗರಿಷ್ಠ ಮಟ್ಟದ ಪ್ರಯತ್ನವನ್ನು ಮಾಡಬೇಕಾಗಿದೆ. ಕೇವಲ ವಾಚಾಳಿತನದ ಭಾಷಣಕ್ಕೆ ಮತ್ತು ಕ್ಲಿಪ್ಪಿಂಗ್ಸ್‌ಗಳ ಭರಾಟೆಯಿಂದ ತುಳುಕುವ ಪ್ರವಚನ ಕಾರ್ಯಕ್ರಮಗಳಿಗೆ ಮಾತ್ರ ತಮ್ಮನ್ನು ಸೀಮಿತಗೊಳಿಸದೆ ಇಸ್ಲಾಮಿನ ನೈಜ ಜ್ಞಾನವನ್ನು ಒದಗಿಸಿಕೊಡಬಲ್ಲಂತಹ ಇಲ್ಮ್ ಭರಿತ (ಅಧ್ಯಯನ ಹಾಗೂ ತರಬೇತಿ ಕಾರ್ಯಕ್ರಮಗಳಿಗೆ ಹೆಚ್ಚಿನ ಒತ್ತನ್ನು ನೀಡಿ) ಭಾಷಣ ಕಾರ್ಯಕ್ರಮಗಳಲ್ಲಿ ಭಾಗವಹಿಸಿ ತಮ್ಮ ಜ್ಞಾನವನ್ನು ವೃದ್ಧಿಸಿಕೊಳ್ಳಲು ಹೆಚ್ಚಿನ ಪ್ರಯತ್ನವನ್ನು ನಡೆಸಬೇಕಾಗಿದೆ. ಆ ಮೂಲಕ ಸ್ವರ್ಗದ ಹಾದಿಯನ್ನು ಸರಳಗೊಳಿಸಲು ಪರಿಶ್ರಮಿಸಬೇಕಾಗಿದೆ.

ಇವೆಲ್ಲದರ ಮಧ್ಯೆಯೂ ಇಲ್ಮ್ ಕಲಿಯಲು ಪ್ರಯತ್ನಿಸುವಾಗ ಉದ್ದೇಶವು ನಿಷ್ಕಳಂಕವಾಗಿರಬೇಕಾಗಿದೆ. ಅನ್ಯಥಾ ಅದು ಸ್ವರ್ಗದ ಹಾದಿಯಲ್ಲಿ ಮಹಾ ತಡೆಗೋಡೆಯಾಗಿ ಮಾರ್ಪಟ್ಟೀತು. ಪ್ರವಾದಿ(ﷺ)ರವರು ಈ ಬಗ್ಗೆ ನೀಡಿರುವ ಎಚ್ಚರಿಕೆಯನ್ನು ನೋಡಿರಿ;

«مَنْ تَعَلَّمَ عِلْمًا مِمَّا يُبْتَغَى بِهِ وَجْهُ اللَّهِ عَزَّ وَجَلَّ لَا يَتَعَلَّمُهُ إِلَّا لِيُصِيبَ بِهِ عَرَضًا مِنَ الدُّنْيَا لَمْ يَجِدْ عَرْفَ الْجَنَّةِ يَوْمَ الْقِيَامَةِ»

“ಓರ್ವ ವ್ಯಕ್ತಿ ಇಲ್ಮ್ ಕಲಿಯುವುದು ತನ್ಮೂಲಕ ಅಲ್ಲಾಹನ ಪ್ರೀತಿ ಗಳಿಸುವುದಾಗಿದ್ದರೆ ಸರಿ. ಐಹಿಕವಾದ ಯಾವುದಾದರೂ ಉದ್ದೇಶಕ್ಕಾಗಿ ಹೊರತು ಅವನು ಅದನ್ನು ಕಲಿಯುವುದಿಲ್ಲ ಎಂದಾದರೆ ಅವನು ಅಂತ್ಯದಿನದಂದು ಸ್ವರ್ಗದ ಸುವಾಸನೆಯನ್ನು ಕೂಡ ಸವಿಯಲಾರನು.” [ಅಬೂದಾವೂದ್]

ಇನ್ನೊಂದು ಹದೀಸಿನಲ್ಲಿ ಹೀಗಿದೆ;

«مَنْ طَلَبَ الْعِلْمَ لِيُجَارِيَ بِهِ الْعُلَمَاءَ أَوْ لِيُمَارِيَ بِهِ السُّفَهَاءَ أَوْ يَصْرِفَ بِهِ وُجُوهَ النَّاسِ إِلَيْهِ أَدْخَلَهُ اللَّهُ النَّارَ»

“ಯಾವನಾದರೂ ವಿದ್ವಾಂಸರೊಂದಿಗೆ ಸ್ಪರ್ಧಿಸಲು ಅಥವಾ ಅಜ್ಞಾನಿಗಳೊಂದಿಗೆ ತರ್ಕಿಸಲು ಅಥವಾ ಜನರ ಗಮನವನ್ನು ತನ್ನೆಡೆಗೆ ಸೆಳೆಯಲು ಇಲ್ಮ್ ಕಲಿಯುವುದಾದರೆ ಅಲಾಹು ಅವನನ್ನು ನರಕಕ್ಕೆ ಪ್ರವೇಶ ಮಾಡಿಸುವನು” [ಅತ್ತಿರ್ಮಿದಿ, ಇಬ್ನ್ ಮಾಜ]

ಅಜ್ಞಾನದಿಂದ ತಮ್ಮನ್ನು ಮುಕ್ತಗೊಳಿಸುವ ಹಾದಿಯು ಇಲ್ಮ್ ಪಡೆಯುವುದೇ ಆಗಿದೆ. ಮಾತ್ರವಲ್ಲ ಸಕಲ ವಿಧ ಪಥಭ್ರಷ್ಟತೆ ಹಾಗೂ ಫಿತ್ನಗಳಿಂದ ತಮ್ಮನ್ನು ಕಾಪಾಡಿಕೊಳ್ಳಲು ಇಲ್ಮ್ ಇರುವವರಿಗೆ ಮಾತ್ರ ಸಾಧ್ಯ. ಅಲ್ಲಾಹುವಿನ ಬಗ್ಗೆ ನೈಜ ಭಯವನ್ನು ಹೊಂದಿರುವವರು ಉಲಮಾಅ್‌ಗಳಾಗಿದ್ದಾರೆ ಎಂದು ಅಲ್ಲಾಹು ಕುರ್‌ಆನಿನಲ್ಲಿ ಹೇಳುವುದನ್ನು ನೋಡಿರಿ:

﴿ إِنَّمَا يَخْشَى ٱللَّهَ مِنْ عِبَادِهِ ٱلْعُلَمَٰٓؤُا۟ ﴾

“ಅಲ್ಲಾಹುವನ್ನು ಭಯಪಡುವವರು ಅವನ ದಾಸರ ಪೈಕಿ ಅರಿವುಳ್ಳವರು ಮಾತ್ರವಾಗಿರುವರು.” [ಕುರ್‌ಆನ್ 35:28]

ಆದರೆ ಇಂದು ಇಲ್ಮ್ ಇರುವವರಿಗೆ ಯಾವುದೇ ಗೌರವಾದರಗಳು ಸಿಗುತ್ತಿಲ್ಲ, ಮಾತ್ರವಲ್ಲ ಧರ್ಮದ ವಿಧಿ ನಿಷೇಧಗಳ ಬಗ್ಗೆ ಮಾತನಾಡುವವರಲ್ಲಿ ಹೆಚ್ಚಿನವರೂ ಅಜ್ಞಾನಿಗಳಾಗಿರುವವರು ಎಂಬುದಾಗಿದೆ ಸತ್ಯ. ಆದ್ದರಿಂದಲೇ ಇಂದು ಸಮುದಾಯವು ಅತಿ ಭೀಕರ ಫಿತ್ನಕ್ಕೊಳಗಾಗುತ್ತಲೇ ಇದೆ. ಅಜ್ಞಾನಿಗಳನ್ನು ಜನರು ತಮ್ಮ ನಾಯಕರನ್ನಾಗಿ ಮಾಡಿಕೊಂಡದ್ದರ ಪರಿಣಾಮವಾಗಿ ಸಕಲ ರೀತಿಯ ಫಿತ್ನ ಹಾಗೂ ಪಥಭ್ರಷ್ಟತೆಯ ಹಾದಿಯು ಇಂದು ತೆರೆಯಲ್ಪಟ್ಟಿದೆ. ಆ ವಿನಾಶದ ಹಾದಿಯನ್ನೇ ಜನರಿಂದು ಸತ್ಯದ ಹಾದಿಯಾಗಿ ಸ್ವೀಕರಿಸಿಕೊಳ್ಳುತ್ತಿರುವುದು ವಿಪರ್ಯಾಸವಾಗಿದೆ. ಪ್ರವಾದಿ(ﷺ)ರವರು ನುಡಿದ ಭವಿಷ್ಯ ನುಡಿಯು ಅಕ್ಷರಶಃ ನಿಜವಾಗುತ್ತಿರುವುದಕ್ಕೆ ನಾವು ಸಾಕ್ಷಿಗಳಾಗುತ್ತಿದ್ದೇವೆಯೇ ಎಂಬ ಸಂದೇಹವು ಇಂದಿನ ದಿನಗಳಲ್ಲಿ ಓರ್ವನಿಗೆ ಮೂಡಿ ಬಂದರೆ ಅದರಲ್ಲಿ ಅತಿಶಯೋಕ್ತಿಯೇನೂ ಇಲ್ಲ. ಪ್ರವಾದಿ(ﷺ)ರವರು ಹೇಳುವುದನ್ನು ನೋಡಿರಿ;

«إِنَّكُمْ الْيَوْمَ فِي زَمَانٍ كَثِيرٌ عُلَمَاؤُهُ قَلِيلٌ خُطَبَاؤُهُ، مَنْ تَرَكَ عُشْرَ مَا يَعْرِفُ فَقَدْ هَوَى، وَيَأْتِي مِنْ بَعْدُ زَمَانٌ كَثِيرٌ خُطَبَاؤُهُ وَقَلِيلٌ عُلَمَاؤُهُ، مَنِ اسْتَمْسَكَ بِعُشْرِ مَا يَعْرِفُ فَقَدْ نَجَا»

"ನೀವಿಂದು ಜೀವಿಸುತ್ತಿರುವ ಕಾಲಘಟ್ಟವು ವಿದ್ವಾಂಸರು ಹೆಚ್ಚಾಗಿರುವ ಮತ್ತು ಭಾಷಣಕಾರರು ಕಡಿಮೆಯಿರುವ ಕಾಲಘಟ್ಟವಾಗಿದೆ. ಇಂದು ನಿಮ್ಮ ಪೈಕಿ ಓರ್ವನು ತಾನು ಅರಿತುಕೊಂಡಿರುವ ಹತ್ತನೇ ಒಂದಂಶವನ್ನು ತೊರೆದರೆ ಅವನು ದಾರಿಗೆಡುವನು. ಆದರೆ ಒಂದು ಕಾಲಘಟ್ಟವು ಬರಲಿದೆ. ಅದು ವಿದ್ವಾಂಸರು ಕಡಿಮೆಯಿರುವ ಮತ್ತು ಭಾಷಣಕಾರರು ಹೆಚ್ಚಾಗಿರುವ ಕಾಲಘಟ್ಟ ವಾಗಿದೆ. ಅಂದು ಯಾರಾದರೂ ತಾನು ಅರಿತಿರುವ ಹತ್ತನೇ ಒಂದಂಶವನ್ನು ಬಿಗಿಯಾಗಿ ಹಿಡಿದುಕೊಂಡರೆ ಅವನು ರಕ್ಷೆ ಹೊಂದುವನು." [ಸಿಲ್ಸಿಲತು ಸ್ವಹೀಹ 2510]

ಇನ್ನೊಂದು ಹದೀಸನ್ನು ನೋಡಿರಿ;

عَنْ عَبْدِ اللَّهِ بْنِ عَمْرِو بْنِ الْعَاصِ رَضِيَ اللَّهُ عَنْهُ قَالَ: سَمِعْتُ رَسُولَ اللَّهِ صَلَّى اللَّهُ عَلَيْهِ وَسَلَّمَ يَقُولُ: «إِنَّ اللَّهَ لَا يَقْبِضُ الْعِلْمَ انْتِزَاعًا يَنْتَزِعُهُ مِنَ الْعِبَادِ وَلَكِنْ يَقْبِضُ الْعِلْمَ بِقَبْضِ الْعُلَمَاءِ حَتَّى إِذَا لَمْ يُبْقِ عَالِمًا اتَّخَذَ النَّاسُ رُؤُسًا جُهَّالًا فَسُئِلُوا فَأَفْتَوْا بِغَيْرِ عِلْمٍ فَضَلُّوا وَأَضَلُّوا»

"ಅಬ್ದುಲ್ಲಾಹ್ ಇಬ್ನ್ ಅಮ್ರ್ ಇಬ್ನುಲ್ ಆಸ್(رضي الله عنه)ರವರು ಹೇಳಿದರು: ಪ್ರವಾದಿ(ﷺ)ರವರು ಹೇಳುವುದನ್ನು ನಾನು ಆಲಿಸಿದ್ದೇನೆ: ಖಂಡಿತವಾಗಿಯೂ ಅಲ್ಲಾಹು ತನ್ನ ದಾಸರಿಂದ ಇಲ್ಮನ್ನು ಒಂದೇ ಹಂತದಲ್ಲಿ ಹಿಂದಕ್ಕೆಳೆಯುವ ಮೂಲಕ ವಶಪಡಿಸುವುದಿಲ್ಲ. ಆದರೆ ವಿದ್ವಾಂಸರನ್ನು ವಶಪಡಿಸುವ (ಮೃತಪಡಿಸುವ) ಮೂಲಕ ಅವನು ಇಲ್ಮನ್ನು ವಶಪಡಿಸುತ್ತಾನೆ. ಹಾಗೆ ಒಬ್ಬನೇ ಒಬ್ಬ ವಿದ್ವಾಂಸರೂ ಇಲ್ಲದಾಗುವಾಗ ಜನರು ಅಜ್ಞಾನಿಗಳನ್ನು ನಾಯಕರನ್ನಾಗಿ ಮಾಡಿಕೊಳ್ಳುತ್ತಾರೆ. ಅವರೊಂದಿಗೆ ಫತ್ವಾ ಕೇಳಲಾದಾಗ ಅವರು ಇಲ್ಮ್ ರಹಿತವಾಗಿ ಫತ್ವಾ ನೀಡುತ್ತಾರೆ. ಹಾಗೆ ಅವರು ಸ್ವತಃ ದಾರಿಗೆಡುವುದರ ಜೊತೆಗೆ ಜನರನ್ನೂ ದಾರಿಗೆಡಿಸುತ್ತಾರೆ." [ಅಲ್‌ಬುಖಾರಿ ಮತ್ತು ಮುಸ್ಲಿಮ್)

ಈ ಹದೀಸನ್ನು ವ್ಯಾಖ್ಯಾನಿಸುತ್ತಾ ಅನ್ನವವೀ (رحمه الله) ಹೇಳುವುದನ್ನು ನೋಡಿರಿ:

هَذَا الْحَدِيثُ يُبَيِّنُ أَنَّ الْمُرَادَ بِقَبْضِ الْعِلْمِ فِي الْأَحَادِيثِ السَّابِقَةِ الْمُطْلَقَةِ لَيْسَ هُوَ مَحْوُهُ مِنْ صُدُورِ حُفَّاظِهِ وَلَكِنْ مَعْنَاهُ أَنَّهُ يَمُوتُ حَمَلَتُهُ وَيَتَّخِذُ النَّاسُ جُهَّالًا يَحْكُمُونَ بِجَهَالَاتِهِمْ فَيَضِلُّونَ وَيُضِلُّونَ.

"ಇಲ್ಮ್ ಅನ್ನು ವಶಪಡಿಸಲಾಗುವುದೆಂದು ಈ ಮೇಲಿನ ಹದೀಸ್‌ಗಳಲ್ಲಿ ಹೇಳಲಾಗಿರುವುದರ ಉದ್ದೇಶವನ್ನು ಈ ಹದೀಸ್ ವಿವರಿಸುತ್ತದೆ. ಅದೇನೆಂದರೆ ಇಲ್ಮ್ ಅನ್ನು ವಶಪಡಿಸಲಾಗುವುದು ಎಂಬುದರ ಉದ್ದೇಶವು ಅವುಗಳನ್ನು ಸಂರಕ್ಷಿಸಿದವರ ಹೃದಯಗಳಿಂದ ಅವುಗಳನ್ನು ಅಳಿಸುವುದಲ್ಲ. ಆದರೆ ಅದರ ಅರ್ಥವು ಇಲ್ಮ್‌ನ ವಾಹಕರು ಮೃತಪಡುವರು ಮತ್ತು ಜನರು ಅಜ್ಞಾನಿಗಳನ್ನು (ಉಲಮಾಗಳನ್ನಾಗಿ) ಮಾಡಿಕೊಳ್ಳುವರು ಎಂದಾಗಿದೆ. ಇವರು ತಮ್ಮ ಅಜ್ಞಾನದೊಂದಿಗೆ ವಿಧಿ ನೀಡುವರು. ಹೀಗೆ ಇವರೂ ಪಥಭ್ರಷ್ಟರಾಗುವರು ಮತ್ತು ಜನರನ್ನೂ ಪಥಭ್ರಷ್ಟರನ್ನಾಗಿಸುವರು."

ಮೇಲೆ ಉಲ್ಲೇಖಿಸಲಾದ ಹದೀಸ್ ಮತ್ತು ಅದಕ್ಕೆ ಇಮಾಮ್ ಅನ್ನವವೀ(رحمه الله)ರವರು ನೀಡಿದ ವ್ಯಾಖ್ಯಾನ ನಮ್ಮ ಈ ಕಾಲಕ್ಕೆ ಎಷ್ಟು ಸೂಕ್ತವಾಗಿ ಹೊಂದಾಣಿಕೆಯಾಗುತ್ತಿದೆಯೆಂಬುದನ್ನು ನೋಡಿರಿ.

ಧರ್ಮದ ಬಗ್ಗೆ ಅದರಲ್ಲಿಲ್ಲದ ಒಂದು ವಿಧಿಯನ್ನು ನೀಡುವುದು ಅಲ್ಲಾಹುವಿನ ಹೆಸರಲ್ಲಿ ಸುಳ್ಳನ್ನು ಹೆಣೆಯುವುದಾಗಿದೆ. ಆ ರೀತಿ ಅಲ್ಲಾಹುವಿನ ಹೆಸರಲ್ಲಿ ಸುಳ್ಳನ್ನು ಹೇಳಿ ಜನರನ್ನು ದಾರಿಗೆಡಿಸುವವರನ್ನು ಅಲ್ಲಾಹು ಅಕ್ರಮಿಗಳೆಂದೇ ಕರೆಯುತ್ತಾನೆ. ಆದ್ದರಿಂದ ಅಲ್ಲಾಹುವಿನ ಧರ್ಮದ ಬಗ್ಗೆ ಮಾತನಾಡುವಾಗ ಅತೀವ ಎಚ್ಚರಿಕೆ ವಹಿಸಬೇಕಾದುದು ಕಡ್ಡಾಯವಾಗಿದೆ. ಅಲ್ಲಾಹು ಕೇಳುವುದನ್ನು ನೋಡಿರಿ;

ಕೊನೆಯ ಪುಟಕ್ಕೆ

# ಜಮಾಅತ್ ಅಹ್ಲೆ ಹದೀಸ್ ಮನ್‌ಹಜುಸ್ಸಲಫ್‌ನಲ್ಲಿದೆ

ಮೊದಲನೇ ಪುಟದಿಂದ

ಜನರಿಗೆ ಕರೆ ನೀಡುತ್ತದೆ. ಅದೇ ರೀತಿ ಅಕೀದಃ (ವಿಶ್ವಾಸ), ಇಬಾದಾತ್ (ಆರಾಧನೆಗಳು), ಮುಆಮಲಾತ್ (ವ್ಯವಹಾರಗಳು), ಅಖ್ಲಾಕ್ (ಸ್ವಭಾವ ವೈಶಿಷ್ಟ್ಯ), ಸಿಯಾಸಿಯ್ಯಃ (ರಾಜಕೀಯ), ಇಜ್ತಿಮಾಅ್ (ಸಮಾಜ) ಮೊದಲಾದ ಯಾವುದೇ ವಿಷಯದಲ್ಲಾದರೂ ಸರಿ, ಮುಹದ್ದಿಸ್‌ಗಳಾದ ವಿದ್ವಾಂಸರ ಮಾರ್ಗದಂತೆ, ಕುರ್‌ಆನ್ ಮತ್ತು ಸುನ್ನತ್ತಿಗೆ ಇತರೆಲ್ಲ ಅಭಿಪ್ರಾಯಗಳಿಗಿಂತಲೂ ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡಬೇಕೆಂದು ಅಹ್ಲೆ ಹದೀಸ್ ಕರೆ ನೀಡುತ್ತದೆ. ಹಾಗೆಯೇ ಶಿರ್ಕ್, ಬಿದ್‌ಅತ್ ಮತ್ತು ಖುರಾಫಾತ್‌ಗಳ ಎಲ್ಲ ನಮೂನೆಗಳ ವಿರುದ್ಧವೂ ಅದು ಯುದ್ಧವನ್ನು ಸಾರುತ್ತದೆ."

ನಂತರ ಜಮಾಅತ್ ಅಹ್ಲೆ ಹದೀಸಿನವರ ಚಿಂತನೆಗಳು ಮತ್ತು ಅವರ ವಿಶ್ವಾಸಗಳ ಬಗ್ಗೆ ಆ ಗ್ರಂಥವು ಹೀಗೆನ್ನುತ್ತದೆ:

"ಅಹ್ಲೆ ಹದೀಸ್‌ಗಳ ಅಕೀದಃ (ವಿಶ್ವಾಸ)ವು ಅಸ್ಸಲಫು ಸ್ಸಾಲಿಹ್‌ಗಳ ಅದೇ ಅಕೀದಃ ವಾಗಿದೆ. ಅದು ಕುರ್‌ಆನ್ ಮತ್ತು ಸುನ್ನತ್ತಿನ ಮೇಲೆ ನಿರ್ಮಿತವಾದುದಾಗಿದೆ. ಅಹ್ಲೆ ಹದೀಸ್‌ಗಳ ಇಲ್ಮೀ ನಿಯಮಗಳು ಮತ್ತು ಮನ್‌ಹಜೀ ಮೂಲತತ್ವಗಳು ಈ ಕೆಳಗಿನ ವಿಷಯಗಳ ಮೇಲೆ ಸ್ಥಾಪಿತವಾಗಿವೆ:

1. ತೌಹೀದ್ (التوحيد): ತೌಹೀದ್ ಧರ್ಮದ ಮೂಲಭೂತ ತತ್ವವಾಗಿದೆಯೆಂದು ಅಹ್ಲೆ ಹದೀಸ್‌ಗಳು ವಿಶ್ವಾಸವಿಡುತ್ತಾರೆ. ಶುದ್ಧವಾದ ತೌಹೀದನ್ನು ಪ್ರಚಾರ ಮಾಡುವ ಮೂಲಕ ಮತ್ತು ಅದನ್ನು ಜನರ ಹೃದಯಗಳಲ್ಲಿ ನೆಡುವ ಮೂಲಕ ಅವರು ತಮ್ಮ ಚಟುವಟಿಕೆಯನ್ನು ಆರಂಭಿಸುತ್ತಾರೆ. ತೌಹೀದಿನ ಮೂರು ವಿಧಗಳನ್ನೂ ಅವರು ವಿವರಿಸುತ್ತಾರೆ. ಆದರೆ ತೌಹೀದುಲ್ ಉಲೂಹಿಯ್ಯತ್ತಿಗೆ ಅವರು ವಿಶೇಷ ಪ್ರಾಮುಖ್ಯತೆಯನ್ನು ನೀಡುತ್ತಾರೆ. ಯಾಕೆಂದರೆ ಜನರಲ್ಲಿ ಹೆಚ್ಚಿನವರೂ ಪ್ರಮಾದವೆಸಗುವುದು ಈ ವಿಧದಲ್ಲಾಗಿದೆ. ಅವರು ತೌಹೀದು ರ್‍ರುಬೂಬಿಯ್ಯಃದಲ್ಲೂ, ಅದು ಆವಶ್ಯಪಡುವ ಅಲ್ಲಾಹನ ಹಾಕಿಮಿಯ್ಯತ್ತಿನಲ್ಲೂ ವಿಶ್ವಾಸವಿಡುತ್ತಾರೆ. ಆದರೆ ಇಸ್ಲಾಮೀ ರಾಜಕೀಯ ವ್ಯವಸ್ಥೆಯನ್ನು ಸ್ಥಾಪಿಸುವುದಕ್ಕೆ ಮತ್ತು ಅಳವಡಿಸುವುದಕ್ಕೆ ಮಾತ್ರ ಅವರು ಅದನ್ನು ಪರ್ಯಾಪ್ತಗೊಳಿಸದೆ, ಮನುಷ್ಯನ ಚಿಂತನೆಗಳಲ್ಲೂ, ಸ್ವಭಾವಗಳಲ್ಲೂ ಮತ್ತು ಶರೀಅತ್ತಿನ ನಿಯಮಗಳು ಮತ್ತು ಕಾನೂನುಗಳು ಅನ್ವಯವಾಗುವ ಅವನ ಬದುಕಿಗೆ ಸಂಬಂಧಿಸಿದ ಎಲ್ಲ ವಿಷಯಗಳಲ್ಲೂ ತೀರ್ಪು ನೀಡಬೇಕಾದವನು ಅಲ್ಲಾಹು ಮಾತ್ರವಾಗಿರಬೇಕು ಎನ್ನುತ್ತಾರೆ.

2. ಅನುಸರಣೆ (الاتباع): ಪ್ರವಾದಿ(ﷺ)ರವರಿಂದ ಏನೆಲ್ಲ ಸಹೀಹಾಗಿ ವರದಿಯಾಗಿದೆಯೋ ಅವೆಲ್ಲವನ್ನೂ ಅಸ್ಸಲಫು ಸ್ಸಾಲಿಹ್‌ಗಳು ಅರ್ಥ ಮಾಡಿಕೊಂಡ ಶೈಲಿಯಲ್ಲೇ ಅನುಸರಿಸುವುದರಲ್ಲಿ ಅವರು ತಮ್ಮನ್ನು ಕೇಂದ್ರೀಕರಿಸುತ್ತಾರೆ. ಆದ್ದರಿಂದ ಕರ್ಮಶಾಸ್ತ್ರಕ್ಕೆ ಸಂಬಂಧಿಸಿದ ಯಾವುದಾದರೂ ಒಂದು ನಿರ್ದಿಷ್ಟ ಮದ್‌ಹಬ್‌ಗೆ ಅಂಟಿಕೊಳ್ಳುವುದರೆಡೆಗೆ ಕರೆ ನೀಡುವ ಮತ್ತು ಆಧಾರವನ್ನು ಕೇಳದ ಅಂಧವಾದ ತಕ್ಲೀದನ್ನು ಅವರು ಅನುಸರಿಸುವುದಿಲ್ಲ. ಬದಲಾಗಿ ಇಜ್ತಿಹಾದಿನ ನಿಬಂಧನೆಗಳು ಯಾರಲ್ಲಿ ನೆರವೇರುತ್ತದೋ ಅವರೆಲ್ಲರಿಗೂ ಇಜ್ತಿಹಾದಿನ ಬಾಗಿಲನ್ನು ತೆರೆಯಬೇಕೆಂದು ಕರೆ ನೀಡುತ್ತಾರೆ. ಮುಜ್ತಹಿದ್‌ಗಳಾದ ಉಲಮಾಗಳನ್ನು ಮತ್ತು ಅನುಸರಣಾಯೋಗ್ಯರಾದ ಇಮಾಮ್‌ಗಳನ್ನು ವಿಶೇಷ ರೀತಿಯಲ್ಲಿ ಗೌರವಿಸಬೇಕೆಂದು ಅವರು ಕರೆ ನೀಡುತ್ತಾರೆ.

3. ಬುದ್ಧಿಗಿಂತಲೂ ಕುರ್‌ಆನ್ ಮತ್ತು ಸುನ್ನತ್ತಿಗೆ ಪ್ರಾಮುಖ್ಯತೆ ನೀಡುವುದು (تقديم النقل على العقل): ಅವರು ಅಭಿಪ್ರಾಯಗಳಿಗಿಂತಲೂ ವರದಿಗಳಿಗೆ (ಹದೀಸ್‌ಗಳಿಗೆ) ಪ್ರಾಮುಖ್ಯತೆ ನೀಡುತ್ತಾರೆ. ಅವರು ಶರೀಅತ್ತಿನಲ್ಲಿ ಏನಿದೆಯೆಂದು ನೋಡುತ್ತಾರೆ, ತರುವಾಯ ತಮ್ಮ ಬುದ್ಧಿಯನ್ನು ಅದಕ್ಕೆ ಶರಣಾಗಿಸುತ್ತಾರೆ. ಯಾಕೆಂದರೆ ಸ್ವಸ್ಥವಾದ ಬುದ್ಧಿಯು ಸಹೀಹಾದ ಶರೀಅತ್ತಿನ ಪಠ್ಯಗಳೊಂದಿಗೆ ಹೊಂದಾಣಿಕೆಯಾಗುತ್ತದೆ ಎಂದು ಅವರು ಅಭಿಪ್ರಾಯ ಪಡುತ್ತಾರೆ. ಆದ್ದರಿಂದ ಬುದ್ಧಿಯ ಮೂಲಕ ಶರೀಅತ್ತನ್ನು ವಿರೋಧಿಸುವುದು ಮತ್ತು ಶರೀಅತ್ತಿಗಿಂತ ಬುದ್ಧಿಗೆ ಪ್ರಾಮುಖ್ಯತೆ ನೀಡುವುದು ಸರಿಯಲ್ಲವೆಂಬುದು ಅವರ ಅಭಿಪ್ರಾಯವಾಗಿದೆ.

4. ಶರಈ ಶುದ್ಧೀಕರಣ (التزكية الشرعية): ಅವರು ಆತ್ಮವನ್ನು ಶರೀಅತ್ತಿನ ಶುದ್ಧೀಕರಣದ ಮೂಲಕ ಶುದ್ಧೀಕರಿಸುತ್ತಾರೆ. ಅಂದರೆ ಅದಕ್ಕಾಗಿ ಅವರು ಕುರ್‌ಆನ್ ಮತ್ತು ಸುನ್ನತ್ತಿನಲ್ಲಿ ಬಂದಂತಹ ಶರೀಅತ್ತಿನ ಮಾರ್ಗಗಳನ್ನು ಸ್ವೀಕರಿಸುತ್ತಾರೆ ಮತ್ತು ಸೂಫೀ ಮೊದಲಾದ ನೂತನ ಶುದ್ಧೀಕರಣಗಳನ್ನು ಹಿಂಬಾಲಿಸುವುದನ್ನು ವಿರೋಧಿಸುತ್ತಾರೆ.

5. ಬಿದ್‌ಅತ್ತಿನ ಬಗ್ಗೆ ಎಚ್ಚರಿಕೆ (التحذير من البدع): ಯಾಕೆಂದರೆ ಬಿದ್‌ಅತ್‌ಗಳನ್ನು ನಿರ್ಮಿಸುವುದು ವಾಸ್ತವದಲ್ಲಿ ಅಲ್ಲಾಹನನ್ನು ತಿದ್ದುವುದಾಗಿದೆ ಮತ್ತು ಅಭಿಪ್ರಾಯ ಹಾಗೂ ಬುದ್ಧಿಯ ಆಧಾರದಲ್ಲಿ ಶರೀಅತ್ತನ್ನು ನಿರ್ಮಿಸುವುದಾಗಿದೆಯೆಂದು ಅವರು ಅಭಿಪ್ರಾಯಪಡುತ್ತಾರೆ. ಇದರೊಂದಿಗೆ ಅವರು ಸುನ್ನತ್ತಿಗೆ ಅಂಟಿಕೊಳ್ಳುವಂತೆ ಮತ್ತು ಎಲ್ಲ ವಿಧ ಬಿದ್‌ಅತ್‌ಗಳನ್ನು ತ್ಯಜಿಸುವಂತೆ ಕರೆ ನೀಡುತ್ತಾರೆ.

6. ದುರ್ಬಲ ಮತ್ತು ಕೃತಕ ಹದೀಸ್‌ಗಳ ಬಗ್ಗೆ ಎಚ್ಚರಿಕೆ (التحذير من الأحاديث الضعيفة والموضوعة): ಯಾಕೆಂದರೆ ದುರ್ಬಲ ಮತ್ತು ಕೃತಕ ಹದೀಸ್‌ಗಳ ಅಪಾಯವು ಸಮುದಾಯದ ಮೇಲೆ ಬಹಳ ಭೀಕರವಾಗಿದೆ. ಆದ್ದರಿಂದ ಪ್ರವಾದಿ(ﷺ)ರವರಿಂದ ಸಹೀಹಾಗಿ ವರದಿಯಾದ –ವಿಶೇಷವಾಗಿ ಅಕೀದಃ ಮತ್ತು ಅಹ್ಕಾಮ್‌ಗಳಿಗೆ ಸಂಬಂಧಿಸಿದ– ಸಹೀಹಾದ ಹದೀಸ್‌ಗಳನ್ನು ಮಾತ್ರ ಅವಲಂಬಿಸಬೇಕೆಂದು ಅವರು ಕರೆ ನೀಡುತ್ತಾರೆ.

[ನೋಡಿ: ಅಲ್‌ಮೌಸೂಅತುಲ್ ಮುಯಸ್ಸರಃ ಫಿಲ್ ಅದ್ಯಾನಿ ವಲ್‌ಮದಾಹಿಬಿ ವಲ್‌ಅಹ್ಝಾಬಿಲ್ ಮುಆಸಿರಃ ಪುಟ 173–185]

[ಕೃಪೆ: http://islamqa.info/ar/ref/159436 ಫತ್ವಾ ಸಂಖ್ಯೆ: 159436] ■

# ವೈವಾಹಿಕ ಜೀವನದ ಶಿಷ್ಟಾಚಾರಗಳು

آداب الزفاف

2

ಅಶ್ಶೈಖ್ ಅಲ್‌ಅಲ್ಲಾಮಾ ಮುಹಮ್ಮದ್ ನಾಸಿರುದ್ದೀನ್ ಅಲ್‌ಅಲ್ಬಾನೀ (ರಹಿಮಹುಲ್ಲಾಹ್)

### 3. ದಂಪತಿಗಳು ಜತೆಯಾಗಿ ನಮಾಝ್ ನಿರ್ವಹಿಸುವುದು:

ದಂಪತಿಗಳು (ಪ್ರಥಮ ರಾತ್ರಿಯಲ್ಲಿ) ಜತೆಯಾಗಿ ಎರಡು ರಕಅತ್ ನಮಾಝ್ ನಿರ್ವಹಿಸುವುದು ಸುನ್ನತ್ತಾಗಿದೆ. ಯಾಕೆಂದರೆ ಇದು ಸಲಫ್‌ಗಳಿಂದ ಉದ್ಧರಿಸಲ್ಪಟ್ಟಿದೆ. ಈ ವಿಷಯದಲ್ಲಿ ಎರಡು ಅಸರ್‌ಗಳಿವೆ:

ಒಂದು: ಅಬೂ ಉಸೈದ್‌ರ ಗುಲಾಮರಾದ ಅಬೀ ಸಈದ್(رضي الله عنه) ಹೇಳುತ್ತಾರೆ:

تَزَوَّجْتُ وَأَنَا مَمْلُوكٌ، فَدَعَوْتُ نَفَرًا مِنْ أَصْحَابِ النَّبِيِّ صَلَّى اللَّهُ عَلَيْهِ وَسَلَّمَ، فِيهِمُ ابْنُ مَسْعُودٍ وَأَبُو ذَرٍّ وَحُذَيْفَةُ، قَالَ: فَأُقِيمَتِ الصَّلَاةُ، قَالَ: فَذَهَبَ أَبُو ذَرٍّ لِيَتَقَدَّمَ، فَقَالُوا: إِلَيْكَ! قَالَ: أَوَ كَذَلِكَ؟ قَالُوا: نَعَمْ، قَالَ: فَتَقَدَّمْتُ بِهِمْ وَأَنَا عَبْدٌ مَمْلُوكٌ، وَعَلَّمُونِي فَقَالُوا: إِذَا دَخَلَ عَلَيْكَ أَهْلُكَ فَصَلِّ رَكْعَتَيْنِ، ثُمَّ سَلِ اللَّهَ مِنْ خَيْرِ مَا دَخَلَ عَلَيْكَ، وَتَعَوَّذْ بِهِ مِنْ شَرِّهِ، ثُمَّ شَأْنُكَ وَشَأْنُ أَهْلِكَ.

“ಗುಲಾಮನಾಗಿರುವಾಗಲೇ ನಾನು ವಿವಾಹ ಮಾಡಿಕೊಂಡೆನು. ನಾನು ಪ್ರವಾದಿ(ﷺ)ರವರ ಸಹಾಬಿಗಳಲ್ಲಿ ಸೇರಿದ ಕೆಲವರನ್ನು ಆಹ್ವಾನಿಸಿದೆನು. ಅವರ ಪೈಕಿ ಇಬ್ನ್ ಮಸ್‌ಊದ್(رضي الله عنه), ಅಬೂದರ್ರ್(رضي الله عنه) ಮತ್ತು ಹುದೈಫಾ(رضي الله عنه)ರವರಿದ್ದರು. ತರುವಾಯ ಇಕಾಮತ್‌ಗಾಗಿ ಕರೆ ನೀಡಲಾದಾಗ ಅಬೂದರ್ರ್(رضي الله عنه) (ಇಮಾಮ್ ನಿಲ್ಲುವುದಕ್ಕಾಗಿ) ಮುಂದೆ ಹೋದರು. ಆಗ ಜನರು ಅವರನ್ನು ತಡೆದರು. ಆಗ ಅವರು ಕೇಳಿದರು: ಅದು ಹೀಗೆಯೇ ಆಗಿದೆಯೇ? ಅವರು ಹೌದೆಂದರು. ನಾನು ಇನ್ನೊಬ್ಬರ ಅಧೀನದಲ್ಲಿರುವ ಓರ್ವ ಗುಲಾಮನಾಗಿದ್ದೂ ಸಹ ಅವರಿಗೆ ಇಮಾಮ್ ಆಗಿ ನಿಂತೆ. ಬಳಿಕ ಅವರು ನನಗೆ (ಈ ಕೆಳಗಿನಂತೆ) ಕಲಿಸಿಕೊಟ್ಟರು. ನಿನ್ನ ಪತ್ನಿ ನಿನ್ನ ಬಳಿ ಪ್ರವೇಶಿಸಿದರೆ (ನೀನು ಅವಳೊಂದಿಗೆ) ಎರಡು ರಕಅತ್ ನಮಾಝ್ ನಿರ್ವಹಿಸು. ತರುವಾಯ ನೀನು ಅಲ್ಲಾಹುವಿನೊಂದಿಗೆ ನಿನ್ನ ಬಳಿ ಪ್ರವೇಶಿಸಿದವಳ ಒಳಿತನ್ನು ಬೇಡು. ಅವಳ ವತಿಯಿಂದಿರುವ ಕೆಡುಕಿನಿಂದ (ಅಲ್ಲಾಹುವಿನೊಂದಿಗೆ) ರಕ್ಷಣೆಯನ್ನು ಬೇಡು. ನಂತರ ಏನು ಮಾಡಬೇಕೆಂಬುದು ನಿನಗೆ ಮತ್ತು ನಿನ್ನ ಪತ್ನಿಗೆ ಬಿಟ್ಟದ್ದು.” [ಇಬ್ನ್ ಅಬೀ ಶೈಬಾ ಮುಸನ್ನಫ್‌ನಲ್ಲಿ ಮತ್ತು ಅಬ್ದುರ್ರಝ್ಝಾಕ್]

ಎರಡು: ಶಕೀಕ್(رضي الله عنه)ರಿಂದ ವರದಿ;

جَاءَ رَجُلٌ يُقَالُ لَهُ أَبُو حَرِيزٍ، فَقَالَ: إِنِّي تَزَوَّجْتُ جَارِيَةً شَابَّةً [بِكْرًا]، وَإِنِّي أَخَافُ أَنْ تَفْرَكَنِي، فَقَالَ عَبْدُ اللَّهِ: إِنَّ الْإِلْفَ مِنَ اللَّهِ، وَالْفَرْكَ مِنَ الشَّيْطَانِ، يُرِيدُ أَنْ يُكَرِّهَ إِلَيْكُمْ مَا أَحَلَّ اللَّهُ لَكُمْ، فَإِذَا أَتَتْكَ فَمُرْهَا أَنْ تُصَلِّيَ وَرَاءَكَ رَكْعَتَيْنِ.

“ಅಬೂ ಹರೀಝ್ ಎಂದು ಕರೆಯಲಾಗುವ ಓರ್ವ ವ್ಯಕ್ತಿ ಬಂದು ಹೇಳಿದರು: ನಾನೊಬ್ಬ ಎಳೆಯ ಹುಡುಗಿಯನ್ನು [ಕನ್ಯೆಯನ್ನು] ವಿವಾಹವಾಗಿರುವೆನು. ಆಕೆ ನನ್ನನ್ನು ದ್ವೇಷಿಸುವಳೋ ಎಂದು ನಾನು ಭಯಪಡುತ್ತಿದ್ದೇನೆ. ಆಗ ಅಬ್ದುಲ್ಲಾಹ್ ಇಬ್ನ್ ಮಸ್‌ಊದ್(رضي الله عنه) ಹೇಳಿದರು: ಖಂಡಿತವಾಗಿಯೂ ಹೊಂದಾಣಿಕೆಯು ಅಲ್ಲಾಹುವಿನ ವತಿಯಿಂದಾಗಿದೆ ಮತ್ತು ದ್ವೇಷವು ಶೈತಾನನ ವತಿಯಿಂದಾಗಿದೆ. ಅಲ್ಲಾಹು ನಿಮಗೆ ಧರ್ಮ ಸಮ್ಮತಗೊಳಿಸಿರುವುದನ್ನು ನಿಮಗೆ ಅಸಹ್ಯಗೊಳಿಸಲು ಅವನು ಉದ್ದೇಶಿಸುತ್ತಾನೆ. ಆದ್ದರಿಂದ ಆಕೆ ನಿನ್ನ ಬಳಿ ಬಂದರೆ ನಿನ್ನ ಹಿಂದೆ ನಿಂತು ಎರಡು ರಕಅತ್ ನಮಾಝ್ ನಿರ್ವಹಿಸುವಂತೆ ಆಕೆಗೆ ಆಜ್ಞಾಪಿಸು.”

ಇನ್ನೊಂದು ವರದಿಯಲ್ಲಿ ಹೀಗಿದೆ;

وَقُلْ: اللَّهُمَّ بَارِكْ لِي فِي أَهْلِي، وَبَارِكْ لَهُمْ فِيَّ، اللَّهُمَّ اجْمَعْ بَيْنَنَا مَا جَمَعْتَ بِخَيْرٍ، وَفَرِّقْ بَيْنَنَا إِذَا فَرَّقْتَ إِلَى خَيْرٍ.

“ಓ ಅಲ್ಲಾಹ್! ನನ್ನ ಪತ್ನಿಯಲ್ಲಿ ನೀನು ನನಗೆ ಬರಕತ್ತನ್ನು ನೀಡು ಮತ್ತು ನನ್ನಲ್ಲಿ ಅವಳಿಗೂ ಬರಕತ್ತನ್ನು ನೀಡು. ಓ ಅಲ್ಲಾಹ್! ನೀನು ನಮ್ಮನ್ನು ಒಳಿತಿನೊಂದಿಗೆ ಒಟ್ಟುಗೂಡಿಸುವ ತನಕ ನಮ್ಮನ್ನು ಒಗ್ಗೂಡಿಸು ಮತ್ತು ನೀನು ನಮ್ಮನ್ನು ಒಳಿತಿನೆಡೆಗೆ ಬೇರ್ಪಡಿಸುವುದಾದರೆ ನಮ್ಮನ್ನು ಬೇರ್ಪಡಿಸು ಎಂದು ಪ್ರಾರ್ಥಿಸು.” (ಇಬ್ನ್ ಅಬೀಶೈಬಾ, ಅತ್ತಬರಾನೀ ಸಹೀಹ್ ಆದ ಸನದ್‌ನೊಂದಿಗೆ)

### 4. ಸಂಭೋಗ ಮಾಡುವಾಗ ಹೇಳಬೇಕಾದುದು:

ಸಂಭೋಗಕ್ಕಿಂತ ಮುಂಚಿತವಾಗಿ ಈ ಕೆಳಗಿನಂತೆ ಪ್ರಾರ್ಥಿಸಬೇಕಾಗಿದೆ:

«بِسْمِ اللَّهِ، اللَّهُمَّ جَنِّبْنَا الشَّيْطَانَ، وَجَنِّبِ الشَّيْطَانَ مَا رَزَقْتَنَا»

“ಅಲ್ಲಾಹುವಿನ ನಾಮದಲ್ಲಿ, ಓ ಅಲ್ಲಾಹ್! ನಮ್ಮನು ಶೈತಾನನಿಂದ ದೂರೀಕರಿಸು ಮತ್ತು ನಮಗೆ ನೀನು ಕರುಣಿಸುವುದರಿಂದಲೂ ನೀನು ಶೈತಾನನನ್ನು ದೂರೀಕರಿಸು.”

ಪ್ರವಾದಿ(ﷺ)ರವರು ಹೇಳಿದರು;

«فَإِنْ قَضَى اللَّهُ بَيْنَهُمَا وَلَدًا لَمْ يَضُرَّهُ الشَّيْطَانُ أَبَدًا»

“ಅಲ್ಲಾಹು ಅವರಿಗೆ ಮಗುವನ್ನು ನೀಡಲು ತೀರ್ಮಾನಿಸಿದರೆ ಶೈತಾನನು ಅದಕ್ಕೆ (ಮಗುವಿಗೆ) ಎಂದಿಗೂ ಉಪದ್ರವ ಕೊಡಲಾರನು.” [ಅಲ್‌ಬುಖಾರಿ, ಅಬೂದಾವೂದ್, ಅತ್ತಿರ್ಮಿದಿ, ಇಬ್ನ್ ಮಾಜ]

### 5. ಪತ್ನಿಯನ್ನು ಸಂಭೋಗಿಸುವುದು ಹೇಗೆ:

ಯಾವುದೇ ದಿಕ್ಕಿನಿಂದಲೂ, ಹಿಂಭಾಗದಿಂದಲೂ ಮುಂಭಾಗದಿಂದಲೂ, ಆಕೆಯ ಯೋನಿಗೆ ಸಂಭೋಗಿಸಬಹುದಾಗಿದೆ. ಯಾಕೆಂದರೆ ಅಲ್ಲಾಹು [ತಬಾರಕ ವತಆಲಾ] ಹೇಳುತ್ತಾನೆ:

﴿نِسَآؤُكُمْ حَرْثٌ لَّكُمْ فَأْتُوا۟ حَرْثَكُمْ أَنَّىٰ شِئْتُمْ﴾

“ನಿಮ್ಮ ಪತ್ನಿಯರು ನಿಮ್ಮ ಹೊಲವಾಗಿರುವರು. ಆದ್ದರಿಂದ ನೀವು ಬಯಸುವ ರೀತಿಯಲ್ಲಿ ನೀವು ನಿಮ್ಮ ಹೊಲದೆಡೆಗೆ ತೆರಳಿರಿ.” [ಕುರ್‌ಆನ್ 2:223]

ಅಂದರೆ ನೀವು ಇಚ್ಛಿಸುವ ರೀತಿಯಲ್ಲಿ ಮುಂಭಾಗದಿಂದಲೋ ಅಥವಾ ಹಿಂಭಾಗದಿಂದಲೋ. ಈ ವಿಷಯದಲ್ಲಿ ಅನೇಕ ಹದೀಸ್‌ಗಳಿವೆ. ಆದರೆ ನಾನು ಎರಡನ್ನು ಮಾತ್ರ ಉದ್ಧರಿಸುತ್ತೇನೆ:

1. ಜಾಬಿರ್(رضي الله عنه)ರಿಂದ: ಅವರು ಹೇಳಿದರು:

كَانَتِ الْيَهُودُ تَقُولُ: إِذَا أَتَى الرَّجُلُ امْرَأَتَهُ مِنْ دُبُرِهَا فِي قُبُلِهَا كَانَ الْوَلَدُ أَحْوَلُ، فَنَزَلَتْ: ﴿نِسَآؤُكُمْ حَرْثٌ لَّكُمْ فَأْتُوا۟ حَرْثَكُمْ أَنَّىٰ شِئْتُمْ﴾ [فَقَالَ رَسُولُ اللَّهِ صَلَّى اللَّهُ عَلَيْهِ وَسَلَّمَ: «مُقْبِلَةٌ وَمُدْبِرَةٌ، إِذَا كَانَ ذَلِكَ فِي الْفَرْجِ»].

“ಯಹೂದಿಗಳು ಹೇಳುತ್ತಿದ್ದರು: ಒಬ್ಬ ವ್ಯಕ್ತಿ ತನ್ನ ಪತ್ನಿಯನ್ನು ಅವಳ ಯೋನಿಗೆ ಹಿಂಭಾಗದಿಂದ ಸಂಭೋಗಿಸಿದರೆ ಮಗು ಮೆಳ್ಳೆಗಣ್ಣಿನವನಾಗಿ ಹುಟ್ಟುವುದು. ಆಗ ಈ ಸೂಕ್ತಿಯು ಅವತೀರ್ಣಗೊಂಡಿತು. ‘ನಿಮ್ಮ ಪತ್ನಿಯರು ನಿಮ್ಮ ಹೊಲವಾಗಿರುವರು. ಆದ್ದರಿಂದ ನೀವು ಬಯಸುವ ರೀತಿಯಲ್ಲಿ ನೀವು ನಿಮ್ಮ ಹೊಲದೆಡೆಗೆ ತೆರಳಿರಿ.’ [ಕುರ್‌ಆನ್ 2:223] ಆಗ ಪ್ರವಾದಿ(ﷺ)ರವರು ಹೇಳಿದರು; ಸಂಭೋಗಿಸುವುದು ಯೋನಿಗಾದರೆ ಅದು ಮುಂಭಾಗದಿಂದಲೋ ಹಿಂಭಾಗದಿಂದಲೋ ಆಗಬಹುದು.” [ಅಲ್‌ಬುಖಾರಿ, ಮುಸ್ಲಿಮ್, ಅನ್ನಸಾಈ (ಇಶ್ರತು ನ್ನಿಸಾಅ್) ಮತ್ತು ಇಬ್ನ್ ಅಬೀ ಹಾತಿಮ್, ಅಲ್‌ಬೈಹಕೀ]

2. ಇಬ್ನ್ ಅಬ್ಬಾಸ್(رضي الله عنه)ರಿಂದ ವರದಿ. ಅವರು ಹೇಳಿದರು:

كَانَ هَذَا الْحَيُّ مِنَ الْأَنْصَارِ، وَهُمْ أَهْلُ وَثَنٍ، مَعَ هَذَا الْحَيِّ مِنْ يَهُودٍ، وَهُمْ أَهْلُ كِتَابٍ، وَكَانُوا يَرَوْنَ لَهُمْ فَضْلًا عَلَيْهِمْ فِي الْعِلْمِ، فَكَانُوا يَقْتَدُونَ بِكَثِيرٍ مِنْ فِعْلِهِمْ، وَكَانَ مِنْ أَمْرِ أَهْلِ الْكِتَابِ أَنْ لَا يَأْتُوا النِّسَاءَ إِلَّا عَلَى حَرْفٍ، وَذَلِكَ أَسْتَرُ مَا تَكُونُ الْمَرْأَةُ، فَكَانَ هَذَا الْحَيُّ مِنَ الْأَنْصَارِ قَدْ أَخَذُوا بِذَلِكَ مِنْ فِعْلِهِمْ، وَكَانَ هَذَا الْحَيُّ مِنْ قُرَيْشٍ يَشْرَحُونَ النِّسَاءَ شَرْحًا مُنْكَرًا، وَيَتَلَذَّذُونَ مِنْهُنَّ مُقْبِلَاتٍ وَمُدْبِرَاتٍ وَمُسْتَلْقِيَاتٍ، فَلَمَّا قَدِمَ مُهَاجِرُونَ الْمَدِينَةَ، تَزَوَّجَ رَجُلٌ مِنْهُمُ امْرَأَةً مِنَ الْأَنْصَارِ، فَذَهَبَ يَصْنَعُ بِهَا ذَلِكَ، فَأَنْكَرَتْهُ عَلَيْهِ، وَقَالَتْ: إِنَّمَا كُنَّا نُؤْتَى عَلَى حَرْفٍ، فَاصْنَعْ ذَلِكَ وَإِلَّا فَاجْتَنِبْنِي، حَتَّى شَرِيَ أَمْرُهَا، فَبَلَغَ ذَلِكَ رَسُولَ اللَّهِ صَلَّى اللَّهُ عَلَيْهِ وَسَلَّمَ، فَأَنْزَلَ اللَّهُ عَزَّ وَجَلَّ: ﴿نِسَآؤُكُمْ حَرْثٌ لَّكُمْ فَأْتُوا۟ حَرْثَكُمْ أَنَّىٰ شِئْتُمْ﴾ أَيْ مُقْبِلَاتٍ وَمُدْبِرَاتٍ وَمُسْتَلْقِيَاتٍ، يَعْنِي بِذَلِكَ مَوْضِعَ الْوَلَدِ.

“ವಿಗ್ರಹಾರಾಧಕರಾಗಿದ್ದ ಅನ್ಸಾರ್‌ಗಳು ಮತ್ತು ಅಹ್ಲುಲ್ ಕಿತಾಬ್‌ಗಳಾದ ಯಹೂದರು ಜೊತೆಯಾಗಿ ವಾಸಿಸುತ್ತಿದ್ದರು. ಇಲ್ಮ್‌ನ ವಿಷಯದಲ್ಲಿ ಅನ್ಸಾರ್‌ಗಳು ಯಹೂದರಿಗೆ ತಮಗಿಂತ ಹೆಚ್ಚು ಶ್ರೇಷ್ಠತೆ ಕಲ್ಪಿಸುತ್ತಿದ್ದರು. ಆದ್ದರಿಂದ ಅನೇಕ ವಿಷಯಗಳಲ್ಲಿ ಅವರು ಯಹೂದರ ಕೃತ್ಯಗಳನ್ನು ಹಿಂಬಾಲಿಸುತ್ತಿದ್ದರು. ಯಹೂದರ ಪ್ರಕಾರ ಪತ್ನಿಯರನ್ನು ಒಂದು ಪಾರ್ಶ್ವದಿಂದಲೇ (ಆಕೆಯನ್ನು ಅಂಗಾತ ಮಲಗಿಸಿ ಆಕೆಯ ಮೇಲೆ ಮಲಗಿ) ಹೊರತು ಸಂಭೋಗಿಸಬಾರದಾಗಿತ್ತು. ಇದು ಹೆಣ್ಣನ್ನು ಸಂಪೂರ್ಣ ಮರೆಮಾಚುವ ವಿಧದಲ್ಲಾಗಿತ್ತು. ಅನ್ಸಾರ್‌ಗಳು ಇದನ್ನೂ ಅವರ ಕೃತ್ಯದಿಂದ ಪಡೆದಿದ್ದರು. ಆದರೆ ಕುರೈಶೀಗಳು ತಮ್ಮ ಪತ್ನಿಯರನ್ನು ಅಸಹಜ ವಿಧದಲ್ಲಿ ತೆರೆದಿಟ್ಟು ಸಂಭೋಗಿಸುತ್ತಿದ್ದರು. ಅವರ ಮುಂಭಾಗದಿಂದಲೂ, ಹಿಂಭಾಗದಿಂದಲೂ, ಅವರನ್ನು ಅಂಗಾತ ಮಲಗಿಸಿಯೂ ಅವರಿಂದ ಸುಖವನ್ನು ಪಡೆಯುತ್ತಿದ್ದರು. ಹೀಗೆ ಮುಹಾಜಿರ್‌ಗಳು ಮದೀನಕ್ಕೆ ಬಂದಾಗ ಅವರ ಪೈಕಿ ಒಬ್ಬರು

ಕೊನೆಯ ಪುಟಕ್ಕೆ

## ಇಮಾಮ್ ಅಹ್ಮದ್ ಇಬ್ನ್ ಹಂಬಲ್(رحمه الله) [ಮರಣ ಹಿ. 241]

# “ಅಲ್ಲಾಹು ಏಳನೇ ಆಕಾಶದ ಮೇಲೆ ಅರ್ಶ್‌ನಲ್ಲಿದ್ದಾನೆ”

ಅಬೂ ಬಕ್ರ್ ಅಲ್‌ಖಲ್ಲಾಲ್(رحمه الله) ರವರ ಶೈಖ್ ಆಗಿರುವ ಯೂಸುಫ್ ಇಬ್ನ್ ಮೂಸಾ ಅಲ್‌ಕತ್ತಾನ್(رحمه الله) ಹೇಳಿದರು:

قِيلَ لِأَبِي عَبْدِ اللَّهِ: اللَّهُ فَوْقَ السَّمَاءِ السَّابِعَةِ عَلَى عَرْشِهِ بَائِنٌ مِنْ خَلْقِهِ، وَقُدْرَتُهُ وَعِلْمُهُ بِكُلِّ مَكَانٍ؟ قَالَ: نَعَمْ هُوَ عَلَى عَرْشِهِ وَلَا يَخْلُو شَيْءٌ مِنْ عِلْمِهِ. [رَوَاهُ الْخَلَّالُ]

“ಅಬೂ ಅಬ್ದಿಲ್ಲಾಹ್ (ಇಮಾಮ್ ಅಹ್ಮದ್ ಇಬ್ನ್ ಹಂಬಲ್)ರೊಂದಿಗೆ ಕೇಳಲಾಯಿತು: ಅಲ್ಲಾಹು ಏಳನೇ ಆಕಾಶದ ಮೇಲೆ ತನ್ನ ಅರ್ಶ್‌ನಲ್ಲಿ ತನ್ನ ಸೃಷ್ಟಿಗಳಿಂದ ಬೇರ್ಪಟ್ಟು ಇದ್ದಾನೆ ಮತ್ತು ಅವನ ಸಾಮರ್ಥ್ಯ ಮತ್ತು ಜ್ಞಾನವು ಎಲ್ಲ ಸ್ಥಳಗಳಲ್ಲೂ ಇದೆಯೆಂಬುದು ಸರಿಯೇ?” ಇಮಾಮ್ ಅಹ್ಮದ್(رحمه الله) ಹೇಳಿದರು: “ಹೌದು, ಅವನು ಅವನ ಅರ್ಶ್‌ನ ಮೇಲಿದ್ದಾನೆ. ಅವನ ಜ್ಞಾನದಿಂದ ಯಾವುದೂ ಮುಕ್ತವಾಗಿಲ್ಲ.”

[ಮುಖ್ತಸರುಲ್ ಉಲುವ್ವ್ ಪುಟ 189]

# ಅಲ್ಲಾಹು ಆಕಾಶವನ್ನು ಹರಿದು ನೋಡುತ್ತಾನೆ

عَنْ يَعْقُوبَ بْنِ عَاصِمٍ أَنَّهُ سَمِعَ رَجُلَيْنِ مِنْ أَصْحَابِ النَّبِيِّ صَلَّى اللَّهُ عَلَيْهِ وَسَلَّمَ أَنَّهُمَا سَمِعَا رَسُولَ اللَّهِ صَلَّى اللَّهُ عَلَيْهِ وَسَلَّمَ يَقُولُ: «مَا قَالَ عَبْدٌ قَطُّ لَا إِلَهَ إِلَّا اللَّهُ وَحْدَهُ لَا شَرِيكَ لَهُ، لَهُ الْمُلْكُ وَلَهُ الْحَمْدُ، وَهُوَ عَلَى كُلِّ شَيْءٍ قَدِيرٌ، مُخْلِصًا بِهَا رُوحُهُ وَمُصَدِّقًا بِهَا قَلْبُهُ لِسَانَهُ، إِلَّا فُتِقَ لَهُ أَبْوَابُ السَّمَاءِ حَتَّى يَنْظُرَ اللَّهُ إِلَى قَائِلِهَا، وَحُقَّ لِعَبْدٍ نَظَرَ اللَّهُ إِلَيْهِ أَنْ يُعْطِيَهُ سُؤْلَهُ» رواه النسائي في عمل اليوم والليلة وصححه الألباني

“ಯಅ್‌ಕೂಬ್ ಇಬ್ನ್ ಆಸಿಮ್(رضي الله عنه)ರಿಂದ: ಪ್ರವಾದಿ(ﷺ)ರವರ ಇಬ್ಬರು ಸಹಾಬಾಗಳು ಪ್ರವಾದಿ(ﷺ)ರವರು ಹೀಗೆ ಹೇಳುವುದನ್ನು ಆಲಿಸಿದ್ದಾರೆ: ಒಬ್ಬನೇ ಒಬ್ಬ ದಾಸನೂ ಲಾಇಲಾಹ ಇಲ್ಲಲ್ಲಾಹು ವಹ್ದಹೂ ಲಾ ಶರೀಕ ಲಹೂ, ಲಹುಲ್ ಮುಲ್ಕು ವಲಹುಲ್ ಹಮ್ದು, ವಹುವ ಅಲಾ ಕುಲ್ಲಿ ಶೈಇನ್ ಕದೀರ್ ಎಂದು ನಿಷ್ಕಳಂಕ ಆತ್ಮದೊಂದಿಗೆ ಮತ್ತು ನಾಲಗೆ ಹೇಳುವುದನ್ನು ಸತ್ಯವೆಂದು ದೃಢೀಕರಿಸುವ ಹೃದಯದೊಂದಿಗೆ ಹೇಳಲಾರನು; ಅಲ್ಲಾಹು ಅದನ್ನು ಹೇಳುವವನನ್ನು ನೋಡುವುದಕ್ಕಾಗಿ ಆಕಾಶದ ದ್ವಾರಗಳು ಹರಿದು ಹೋಗದಿರುವ ಹೊರತು. (ಈ ರೀತಿ ಹೇಳುವ) ಯಾವ ದಾಸನನ್ನು ಅಲ್ಲಾಹು ನೋಡುತ್ತಾನೋ ಅವನು ಕೇಳುವುದನ್ನು ಅಲ್ಲಾಹು ಅವನಿಗೆ ನೀಡಬೇಕಾದುದು ಅವನ ಹಕ್ಕಾಗಿದೆ.” [ಅನ್ನಸಾಈ ‘ಅಮಲುಲ್ ಯೌಮಿ ವಲ್ಲೈಲಃ’ದಲ್ಲಿ. ಅಶ್ಶೈಖ್ ಅಲ್‌ಅಲ್ಬಾನೀ ಇದನ್ನು ಸಹೀಹ್ ಎಂದಿದ್ದಾರೆ.]

## ಹರಮಾರಿ ಶೈತಾನರಿಂದ ರಕ್ಷಣೆ ಪಡೆಯುವುದಕ್ಕಿರುವ ದುಆ

«أَعُوذُ بِكَلِمَاتِ اللَّهِ التَّامَّاتِ الَّتِي لَا يُجَاوِزُهُنَّ بَرٌّ وَلَا فَاجِرٌ مِنْ شَرِّ مَا خَلَقَ، وَذَرَأَ، وَبَرَأَ، وَمِنْ شَرِّ مَا يَنْزِلُ مِنَ السَّمَاءِ، وَمِنْ شَرِّ مَا يَعْرُجُ فِيهَا، وَمِنْ شَرِّ مَا ذَرَأَ فِي الْأَرْضِ وَبَرَأَ، وَمِنْ شَرِّ مَا يَخْرُجُ مِنْهَا، وَمِنْ شَرِّ فِتَنِ اللَّيْلِ وَالنَّهَارِ، وَمِنْ شَرِّ كُلِّ طَارِقٍ، إِلَّا طَارِقًا يَطْرُقُ بِخَيْرٍ يَا رَحْمَنُ»

**“ಅಊದು ಬಿಕಲಿಮಾತಿಲ್ಲಾಹಿ ತ್ತಾಮ್ಮಾತಿಲ್ಲತೀ ಲಾ ಯುಜಾವಿಝುಹುನ್ನ ಬರ್‍ರುನ್ ವಲಾ ಫಾಜಿರುನ್ ಮಿನ್ ಶರ್‍ರಿ ಮಾ ಖಲಕ, ವದರಅ, ವಬರಅ, ವಮಿನ್ ಶರ್‍ರಿ ಮಾ ಯನ್‌ಝಿಲು ಮಿನ ಸ್ಸಮಾಇ, ವಮಿನ್ ಶರ್‍ರಿ ಮಾ ಯಅ್‌ರುಜು ಫೀಹಾ, ವಮಿನ್ ಶರ್‍ರಿ ಮಾ ದರಅ ಫಿಲ್ ಅರ್ದಿ ವಬರಅ, ವಮಿನ್ ಶರ್‍ರಿ ಮಾ ಯಖ್ರುಜು ಮಿನ್‌ಹಾ, ವಮಿನ್ ಶರ್‍ರಿ ಫಿತನಿಲ್ಲೈಲಿ ವನ್ನಹಾರಿ, ವಮಿನ್ ಶರ್‍ರಿ ಕುಲ್ಲಿ ತಾರಿಕಿನ್, ಇಲ್ಲಾ ತಾರಿಕನ್ ಯತ್ರುಕು ಬಿಖೈರಿನ್ ಯಾ ರಹ್ಮಾನ್”**

(ಅಲ್ಲಾಹು ಸೃಷ್ಟಿಸಿದ ಕೆಡುಕಿನಿಂದ, ಆಕಾಶದಿಂದ ಇಳಿಯುವ ಕೆಡುಕಿನಿಂದ, ಭೂಮಿಯಿಂದ ಏರಿ ಹೋಗುವ ಕೆಡುಕಿನಿಂದ, ಭೂಮಿಯಲ್ಲಿ ಅವನು ಸೃಷ್ಟಿಸಿದ ಕೆಡುಕಿನಿಂದ, ಭೂಮಿಯಿಂದ ಹೊರಬರುವ ಕೆಡುಕಿನಿಂದ, ರಾತ್ರಿ ಮತ್ತು ಹಗಲುಗಳ ಫಿತ್ನಗಳ ಕೆಡುಕಿನಿಂದ ಮತ್ತು ರಾತ್ರಿಯಲ್ಲಿ ಬರುವವುಗಳ ಕೆಡುಕಿನಿಂದ –ಒಳಿತಿನೊಂದಿಗೆ ರಾತ್ರಿಯಲ್ಲಿ ಬರುವವರ ಹೊರತು– ಸಜ್ಜನನಾಗಲಿ ದುಷ್ಟನಾಗಲಿ ದಾಟಿ ಹೋಗಲು ಸಾಧ್ಯವಾಗದಂತಹ ಅಲ್ಲಾಹನ ಸಮಗ್ರ ವಚನಗಳೊಂದಿಗೆ ನಾನು ರಕ್ಷಣೆಯನ್ನು ಬೇಡುತ್ತಿದ್ದೇನೆ. ಓ ಪರಮ ದಯಾಮಯನೇ)

[ಸಿಲ್ಸಿಲತು ಸ್ಸಹೀಹಃ 2/495, ಹದೀಸ್ ನಂ. 840]

## 84 ವರ್ಷವಾದಾಗ ಅಶ್ಶೈಖ್ ಅಲ್‌ಅಲ್ಬಾನೀ(رحمه الله) ಹೇಳಿದ್ದೇನು?

ಅಬೂ ಹುರೈರಾ(رضي الله عنه)ರಿಂದ ವರದಿ. ಪ್ರವಾದಿ(ﷺ) ರವರು ಹೇಳಿದರು:

«أَعْمَارُ أُمَّتِي مَا بَيْنَ السِّتِّينَ إِلَى السَّبْعِينَ وَأَقَلُّهُمْ مَنْ يُجَوِّزُ ذَلِكَ»

“ನನ್ನ ಉಮ್ಮತ್ತಿನ ಆಯುಷ್ಯ ಅರುವತ್ತು ಮತ್ತು ಎಪ್ಪತ್ತರ ಮಧ್ಯೆಯಾಗಿದೆ. ಕೆಲವೇ ಕೆಲವರು ಅದನ್ನು ದಾಟಿ ಹೋಗುವರು.” [ಮವಾರಿದು ಝ್ಝಮ್‌ಆನ್]

ಇದರ ವರದಿಗಾರರಲ್ಲೊಬ್ಬರಾದ ಅಲ್‌ಹಸನ್ ಇಬ್ನ್ ಅರಫ(رحمه الله) ಹೇಳಿದರು: “ಆ ಕೆಲವೇ ಕೆಲವರಲ್ಲಿ ನಾನೂ ಒಬ್ಬನಾಗಿದ್ದೇನೆ.”

ಅಶ್ಶೈಖ್ ಅಲ್‌ಅಲ್ಬಾನೀ(رحمه الله) ಹೇಳಿದರು: ಆ ಕೆಲವೇ ಕೆಲವರಲ್ಲಿ ನಾನು ಕೂಡ ಒಬ್ಬನಾಗಿದ್ದೇನೆ. ಯಾಕೆಂದರೆ ನನಗೆ 84 ವರ್ಷ ಪ್ರಾಯವಾಗಿದೆ. ಆಯುಷ್ಯವನ್ನು ದೀರ್ಘಗೊಳಿಸಲಾದ ಮತ್ತು ಸತ್ಕರ್ಮಗಳನ್ನು ಅಂದಗೊಳಿಸಲಾದ ಜನರೊಂದಿಗೆ ನನ್ನನ್ನೂ ಸೇರಿಸಬೇಕೆಂದು ನನ್ನ ರಬ್ಬ್ [ಸುಬ್‌ಹಾನಹು ವತಆಲಾ]ನೊಂದಿಗೆ ನಾನು ಬೇಡುತ್ತಿದ್ದೇನೆ.

ಆದರೂ ಕೆಲವೊಮ್ಮೆ ಮುಸ್ಲಿಮರು ಅವರ ಧರ್ಮದಿಂದ ತಪ್ಪಿ ಹೋಗಿರುವುದರಿಂದ ಅವರಿಗೆ ಬಾಧಿಸಿರುವುದನ್ನು ಮತ್ತು ಜನರಲ್ಲೇ ಅತಿನಿಕೃಷ್ಟರಾದವರ ಕಡೆಯಿಂದ ಅವರ ಮೇಲಗಿರುವ ಅಪಮಾನವನ್ನು ಕಾಣುವಾಗ ನಾನು ಕೆಲವೊಮ್ಮೆ ಮರಣವನ್ನು ಆಶಿಸುತ್ತೇನೆ. ಆದರೆ ಅಲ್ಲಾಹನಲ್ಲಿ ಶರಣು! ಅನಸ್(رضي الله عنه)ರವರ ಹದೀಸ್ ನನ್ನ ಮುಂದಿದೆ. ಆದ್ದ–ರಿಂದ ನನ್ನ ಪ್ರವಾದಿ(ﷺ) ನನಗೆ ಏನನ್ನು ಆದೇಶಿಸಿದ್ದಾರೋ ಅದರ ಹೊರತು ಬೇರೇನನ್ನೂ ಹೇಳುವುದು ನನಗೆ ಯುಕ್ತವಾದುದಲ್ಲ.

«اللَّهُمَّ أَحْيِنِي مَا كَانَتِ الْحَيَاةُ خَيْرًا لِي وَتَوَفَّنِي إِذَا كَانَتِ الْوَفَاةُ خَيْرًا لِي»

“ಓ ಅಲ್ಲಾಹ್! ನನ್ನ ಬದುಕು ನನಗೆ ಒಳಿತಾಗಿರುವ ತನಕ ನನ್ನನ್ನು ಬದುಕಿಸು ಮತ್ತು ನನ್ನ ಮರಣವು ನನಗೆ ಒಳಿತಾಗಿರುವಾಗ ನನ್ನನ್ನು ಮೃತಪಡಿಸು.”

ನನ್ನ ಪ್ರವಾದಿ(ﷺ) ನನಗೆ ಕಲಿಸಿಕೊಟ್ಟ ಪ್ರಾರ್ಥನೆಯನ್ನು ನಾನು ಪ್ರಾರ್ಥಿಸುತ್ತೇನೆ.

«اللَّهُمَّ مَتِّعْنَا بِأَسْمَاعِنَا وَأَبْصَارِنَا وَقُوَّتِنَا مَا أَحْيَيْتَنَا وَاجْعَلْهُ الْوَارِثَ مِنَّا»

“ಓ ಅಲ್ಲಾಹ್! ನೀನು ನಮ್ಮನ್ನು ಜೀವಂತವಾಗಿಡುವ ತನಕ ನಮ್ಮ ಶ್ರವಣಗಳಲ್ಲಿ, ದೃಷ್ಟಿಗಳಲ್ಲಿ ಮತ್ತು ನಮ್ಮ ಶಕ್ತಿಯಲ್ಲಿ ನಮಗೆ ಒದಗಿಸು ಮತ್ತು ಅದನ್ನು ನಮ್ಮಿಂದಿರುವ ಒಂದು ವಾರಸನ್ನಾಗಿ ಮಾಡು.”

ಖಂಡಿತವಾಗಿಯೂ ಅಲ್ಲಾಹು [ಸುಬ್‌ಹಾನಹು ವತಆಲಾ] ನನಗೆ ಅನೇಕ ಅನುಗ್ರಹಗಳನ್ನು ದಯಪಾಲಿಸಿದ್ದಾನೆ ಮತ್ತು ಇವೆಲ್ಲವನ್ನೂ ಒದಗಿಸಿದ್ದಾನೆ. ಆದ್ದರಿಂದ ಸಂಶೋಧನೆ ಮಾಡಲು, ಸ್ಥಿರೀಕರಿಸಲು ಮತ್ತು ಬರೆಯಲು ಕೆಲವೇ ಕೆಲವರಿಗೆ ಇರುವ ಶಕ್ತಿಯನ್ನು ಅವನು ನನಗೆ ಕರುಣಿಸಿದ್ದಾನೆ. ನಾನು ಈಗಲೂ ಕಡ್ಡಾಯ ನಮಾಝ್‌ಗಳನ್ನು ನಿಂತುಕೊಂಡೇ ನಿರ್ವಹಿಸುತ್ತಿದ್ದೇನೆ. ನಾನು ನನ್ನ ಕಾರನ್ನು ಬಹುದೂರದವರೆಗೆ ವೇಗದಲ್ಲಿ ನಾನೇ ಚಲಾಯಿಸುತ್ತೇನೆ. ವೇಗವನ್ನು ತಗ್ಗಿಸಿ ಚಲಾಯಿಸಲು ಕೆಲವರು ನನಗೆ ಸಲಹೆ ನೀಡುತ್ತಾರೆ. ಆದರೆ ಅವರಿಗೆ ತಿಳಿದಿರದಂತಹ ಒಂದು ವಿವರಣೆ ನನ್ನ ಬಳಿಯಿದೆ.

﴿ وَأَمَّا بِنِعْمَةِ رَبِّكَ فَحَدِّثْ ﴾ ١١

“ತಮ್ಮ ಪ್ರಭುವಿನ ಅನುಗ್ರಹದ ಬಗ್ಗೆ ತಾವು ಮಾತನಾಡುತ್ತಿರಿ.” [ಕುರ್‌ಆನ್ ಅದ್ದುಹಾ 11]

ನನ್ನ ರಬ್ಬ್ [ಸುಬ್‌ಹಾನಹು ವತಆಲಾ] ನನ್ನ ಮೇಲೆ ಅವನ ಅನುಗ್ರಹಗಳನ್ನು ಇನ್ನೂ ಸುರಿಸುವನು, ಅದನ್ನು ನನ್ನಿಂದಿರುವ ಒಂದು ವಾರಸನ್ನಾಗಿ ಮಾಡುವನು, ನನ್ನನ್ನು ಮುಸ್ಲಿಮನನ್ನಾಗಿ ಮತ್ತು ನಾನು ಯಾವುದರೆಡೆಗೆ ಕರೆ ನೀಡುತ್ತಿದ್ದೆನೋ ಮತ್ತು ಯಾವುದರ ಬಗ್ಗೆ ಬರೆಯುತ್ತಿದ್ದೆನೋ ಆ ಸುನ್ನಃದ ಮೇಲೆ ನನ್ನನ್ನು ಮೃತಪಡಿಸುವನು ಎಂದು ನಾನು ಆಶಿಸುತ್ತೇನೆ. ■

# ಅಮಾನತ್‌ಗಳನ್ನು ನೆರವೇರಿಸಿರಿ

ಅಶ್ಶೈಖ್ ಅಲ್‌ಅಲ್ಲಾಮಾ ಮುಹಮ್ಮದ್ ಇಬ್ನ್ ಸಾಲಿಹ್ ಇಬ್ನ್ ಉಸೈಮೀನ್ (ರಹಿಮಹುಲ್ಲಾಹ್)

ಓ ಜನರೇ! ಅಲ್ಲಾಹನನ್ನು ಭಯಪಡಿರಿ. ನಿಮ್ಮ ಮೇಲೆ ಹೊರಿಸಲಾದ ಅಮಾನತ್‌ಗಳನ್ನು ನೆರವೇರಿಸಿರಿ. ಅಲ್ಲಾಹು ಹೇಳುತ್ತಾನೆ:

﴿ يَٰٓأَيُّهَا ٱلَّذِينَ ءَامَنُواْ لَا تَخُونُواْ ٱللَّهَ وَٱلرَّسُولَ وَتَخُونُوٓاْ أَمَٰنَٰتِكُمْ وَأَنتُمْ تَعْلَمُونَ ﴿٢٧﴾ ﴾

"ಓ ಸತ್ಯವಿಶ್ವಾಸಿಗಳೇ! ನೀವು ಅಲ್ಲಾಹುವಿಗೆ ಮತ್ತು ಸಂದೇಶವಾಹಕರಿಗೆ ನಂಬಿಕೆದ್ರೋಹ ಮಾಡದಿರಿ. ನಿಮ್ಮ ಮೇಲೆ ನಂಬಿಕೆಯಿಟ್ಟು ಒಪ್ಪಿಸಲಾದ ವಿಷಯಗಳಲ್ಲಿ (ಅಮಾನತ್‌ಗಳಲ್ಲಿ) ನೀವು ಅರಿತವರಾಗಿದ್ದೂ ಸಹ ನಂಬಿಕೆದ್ರೋಹ ಮಾಡದಿರಿ." [ಕುರ್‌ಆನ್ 8:27]

ಓ ಮುಸ್ಲಿಮರೇ! ಹದ್ದುಮೀರುವ ಮೂಲಕ ಅಥವಾ ಅಭಾವವನ್ನುಂಟು ಮಾಡುವ ಮೂಲಕ, ಅಧಿಕಗೊಳಿಸುವ ಮೂಲಕ ಅಥವಾ ಕಡಿತಗೊಳಿಸುವ ಮೂಲಕ ನಿಮ್ಮ ಅಮಾನತ್‌ಗಳಲ್ಲಿ ನೀವು ನಂಬಿಕೆದ್ರೋಹ ಮಾಡದಿರಿ. ಯಾಕೆಂದರೆ ನಂಬಿಕೆದ್ರೋಹವು ಈಮಾನಿನಲ್ಲಿ ಅಪೂರ್ಣತೆಯನ್ನುಂಟುಮಾಡುತ್ತದೆ. ಅದು ನಾಶನಷ್ಟಗಳಿಗೆ ಹೇತುವಾಗಿದೆ. ಪ್ರವಾದಿ(ﷺ) ರವರು ಹೇಳಿದರು:

«لَا إِيمَانَ لِمَنْ لَا أَمَانَةَ لَهُ»

"ಯಾರಿಗೆ ವಿಶ್ವಾಸಾರ್ಹತೆ (ಅಮಾನತ್) ಇಲ್ಲವೋ ಅವನಿಗೆ ಈಮಾನ್ ಇಲ್ಲ."

«آيَةُ الْمُنَافِقِ ثَلَاثٌ، إِذَا حَدَّثَ كَذَبَ وَإِذَا وَعَدَ أَخْلَفَ وَإِذَا اؤْتُمِنَ خَانَ، وَإِنْ صَلَّى وَصَامَ وَزَعَمَ أَنَّهُ مُسْلِمٌ»

"ಮುನಾಫಿಕ್‌ನ ಚಿಹ್ನೆಗಳು (ಸ್ವಭಾವಗಳು) ಮೂರು. ಅವನು ಮಾತನಾಡಿದರೆ ಸುಳ್ಳು ಹೇಳುತ್ತಾನೆ, ವಾಗ್ದಾನ ಮಾಡಿದರೆ ಉಲ್ಲಂಘಿಸುತ್ತಾನೆ ಮತ್ತು ನಂಬಿಕೆಯಿಟ್ಟರೆ ನಂಬಿಕೆದ್ರೋಹ ಮಾಡುತ್ತಾನೆ. ಅವನು ನಮಾಝ್ ಮಾಡಿದರೂ, ಉಪವಾಸ ಆಚರಿಸಿದರೂ, ತಾನು ಮುಸ್ಲಿಮ್ ಎಂದು ವಾದಿಸಿದರೂ ಸಹ."

«إِذَا جَمَعَ اللَّهُ الْأَوَّلِينَ وَالْآخِرِينَ يَوْمَ الْقِيَامَةِ يُرْفَعُ لِكُلِّ غَادِرٍ لِوَاءٌ فَيُقَالُ: هَذِهِ غَدْرَةُ فُلَانِ ابْنِ فُلَانٍ»

"ಪುನರುತ್ಥಾನ ದಿನದಂದು ಅಲ್ಲಾಹು ಮೊದಲಿನವರನ್ನೂ ಕೊನೆಯವರನ್ನೂ ಒಟ್ಟುಗೂಡಿಸಿದಾಗ ಎಲ್ಲ ವಂಚಕರಿಗೂ ಒಂದೊಂದು ಧ್ವಜವನ್ನು ಏರಿಸಿ ಹೀಗೆನ್ನಲಾಗುವುದು: ಇದು ಇಂತಿಂತಹವನ ಮಗನಾದ ಇಂತಿಂತಹವನು ಮಾಡಿದ ವಂಚನೆಯಾಗಿದೆ."

ಈ ಧ್ವಜವನ್ನು ಅವನಿಗೆ ಏರಿಸಲಾಗುವುದು ಅವನನ್ನು ಸೃಷ್ಟಿಗಳೆಲ್ಲರ ಮಧ್ಯೆ ಅಪಮಾನ ಮಾಡುವ ಮತ್ತು ಗೇಲಿ ಮಾಡುವ ಸಲುವಾಗಿದೆ.

ಓ ಮುಸ್ಲಿಮರೇ! ಅಲ್ಲಾಹನಲ್ಲಿ ವಿಶ್ವಾಸವಿಟ್ಟವರೇ! ಅಮಾನತ್ ಎಂಬುದು ಇಬಾದತ್‌ಗಳಲ್ಲೂ ವ್ಯವಹಾರಗಳಲ್ಲೂ ಇವೆ. ಇಬಾದತ್‌ಗಳಲ್ಲಿರುವ ಅಮಾನತ್ ಏನೆಂದರೆ: ನಿಷ್ಕಳಂಕವಾದ ವಿಶ್ವಾಸದೊಂದಿಗೆ ಮತ್ತು ಪ್ರವಾದಿ(ﷺ) ರವರ ಅನುಸರಣೆಯೊಂದಿಗೆ ಅಲ್ಲಾಹನಿಗೆ ವಿಧೇಯನಾಗಿ ಬದುಕುವುದಾಗಿದೆ. ಅವನ ಆಜ್ಞೆಗಳನ್ನು ಪಾಲಿಸುವುದು ಮತ್ತು ಅವನ ನಿಷೇಧಗಳಿಂದ ದೂರವಿರುವುದಾಗಿದೆ. ರಹಸ್ಯವಾಗಿಯೂ ಬಹಿರಂಗವಾಗಿಯೂ ಅವನನ್ನು ಭಯಪಡುವುದಾಗಿದೆ. ಜನರು ನಿನ್ನನ್ನು ಗಮನಿಸುತ್ತಿರುವಾಗಲೂ, ಗಮನಿಸದೆ ಇರುವಾಗಲೂ ಅಲ್ಲಾಹನನ್ನು ಭಯಪಡುವುದಾಗಿದೆ. ಆದರೆ ಜನರು ಗಮನಿಸುವಾಗ ಅಲ್ಲಾಹನನ್ನು ಭಯಪಡುವುದು ಮತ್ತು ಏಕಾಂತದಲ್ಲಿರುವಾಗ ಅಲ್ಲಾಹನಿಗೆ ಅವಿಧೇಯತೆ ತೋರಿಸುವುದು ರಿಯಾಅ್ ಆಗಿದೆ. ರಿಯಾಅ್ ಸತ್ಕರ್ಮಗಳನ್ನು ನಿಷ್ಫಲಗೊಳಿಸುತ್ತದೆ. ಕಣ್ಣಿನ ವಂಚನೆಯ ನೋಟಗಳನ್ನು ಮತ್ತು ಹೃದಯಗಳು ಬಚ್ಚಿಡುವುದನ್ನು ಅಲ್ಲಾಹು ಅರಿಯುತ್ತಾನೆಂಬುದು ನಿಮಗೆ ತಿಳಿಯದೇ? ಇಂತಹ ವ್ಯಕ್ತಿಯ ಬಗ್ಗೆ ಅಲ್ಲಾಹು ಏನೆನ್ನುತ್ತಾನೆ ಗೊತ್ತೇ?

﴿ أَمْ يَحْسَبُونَ أَنَّا لَا نَسْمَعُ سِرَّهُمْ وَنَجْوَىٰهُم ۚ بَلَىٰ وَرُسُلُنَا لَدَيْهِمْ يَكْتُبُونَ ﴿٨٠﴾ ﴾

"ಅವರ ರಹಸ್ಯಗಳನ್ನು ಮತ್ತು ಗುಪ್ತ ಮಾತುಕತೆಗಳನ್ನು ನಾವು ಆಲಿಸುತ್ತಿಲ್ಲ ಎಂದು ಅವರು ಭಾವಿಸಿರುವರೇ? ಹೌದು! ನಮ್ಮ ದೂತರು (ಮಲಕ್‌ಗಳು) ಅವರ ಬಳಿ ದಾಖಲಿಸುತ್ತಿರುವರು." [ಕುರ್‌ಆನ್ 43:80]

﴿ أَوَلَا يَعْلَمُونَ أَنَّ ٱللَّهَ يَعْلَمُ مَا يُسِرُّونَ وَمَا يُعْلِنُونَ ﴿٧٧﴾ ﴾

"ಆದರೆ ಅವರು ರಹಸ್ಯವಾಗಿಡುವುದನ್ನು ಮತ್ತು ಬಹಿರಂಗಪಡಿಸುವುದನ್ನು ಅಲ್ಲಾಹು ಅರಿಯುತ್ತಿರುವನೆಂಬುದು ಅವರಿಗೆ ತಿಳಿಯದೇ?" [ಕುರ್‌ಆನ್ 2:77]

﴿ يَسْتَخْفُونَ مِنَ ٱلنَّاسِ وَلَا يَسْتَخْفُونَ مِنَ ٱللَّهِ وَهُوَ مَعَهُمْ إِذْ يُبَيِّتُونَ مَا لَا يَرْضَىٰ مِنَ ٱلْقَوْلِ ۚ وَكَانَ ٱللَّهُ بِمَا يَعْمَلُونَ مُحِيطًا ﴿١٠٨﴾ ﴾

"ಅವರು ಜನರಿಂದ (ವಾಸ್ತವತೆಗಳನ್ನು) ಮರೆ ಮಾಚುತ್ತಿರುವರು. ಆದರೆ ಅಲ್ಲಾಹುವಿನಿಂದ (ಏನನ್ನೂ) ಮರೆಮಾಚಲು ಅವರಿಗೆ ಸಾಧ್ಯವಾಗದು. ಅಲ್ಲಾಹು ಮೆಚ್ಚದ ಮಾತುಗಳೊಂದಿಗೆ ಅವರು ರಾತ್ರಿಯಲ್ಲಿ ರಹಸ್ಯ ಮಾತುಕತೆ ನಡೆಸುತ್ತಿರುವಾಗ ಅವನು ಅವರೊಂದಿಗೇ ಇರುವನು. ಅವರು ಮಾಡುತ್ತಿರುವುದನ್ನೆಲ್ಲ ಅಲ್ಲಾಹು ಸೂಕ್ಷ್ಮವಾಗಿ ಅರಿಯುವವನಾಗಿರುವನು." [ಕುರ್‌ಆನ್ 4:108]

ಓ ಮುಸ್ಲಿಮನೇ! ಅಲ್ಲಾಹನಲ್ಲಿ ಮತ್ತು ಅವನ ರಸೂಲರಲ್ಲಿ ವಿಶ್ವಾಸವಿಟ್ಟವನೇ! ನೀನೆಲ್ಲೇ ಇದ್ದರೂ ಅಲ್ಲಾಹನನ್ನು ಭಯಪಡು. ಅಲ್ಲಾಹನನ್ನು ಭಯಪಡು. ನೀನು ಅವನನ್ನು ಕಾಣುತ್ತಿರುವಂತೆ ಅವನಿಗೆ ಇಬಾದತ್ ಮಾಡು. ನೀನು ಅವನನ್ನು ಕಾಣುವುದಿಲ್ಲವಾದರೂ ಅವನು ನಿನ್ನನ್ನು ನೋಡುತ್ತಿದ್ದಾನೆ.

ಅಲ್ಲಾಹನಲ್ಲಿ ಮತ್ತು ಅವನ ರಸೂಲರಲ್ಲಿ ವಿಶ್ವಾಸವಿಟ್ಟವನೇ! ನಿನ್ನ ನಿಯ್ಯತ್ತನ್ನು ಸರಿಪಡಿಸು. ನಿನ್ನ ಇಬಾದತ್ತನ್ನು ನಿನ್ನ ರಬ್ಬ್‌ಗೆ ನಿಷ್ಕಳಂಕಗೊಳಿಸು. ಪ್ರವಾದಿ(ﷺ)ರವರ ಅನುಸರಣೆಯಲ್ಲಿ ನಿಷ್ಕಳಂಕನಾಗಿರು. ಜನರು ನೋಡುವುದಕ್ಕಾಗಿ ಇಬಾದತ್ ಮಾಡುವುದರ ಬಗ್ಗೆ ಎಚ್ಚರ ವಹಿಸು. ಯಾಕೆಂದರೆ ಇಬಾದತ್ ಎಂಬುದು ಅಲ್ಲಾಹನಿಗೆ ಮಾತ್ರವಿರುವ ಹಕ್ಕಾಗಿದೆ. ಅದರಲ್ಲಿ ಬೇರೊಬ್ಬ ಮನುಷ್ಯನನ್ನು ಅಥವಾ ಅಲ್ಲಾಹನ ಸೃಷ್ಟಿಗಳಲ್ಲಿ ಯಾರನ್ನೂ ಸಹಭಾಗಿಗಳನ್ನಾಗಿ ಮಾಡುವುದಕ್ಕೆ ಅನುಮತಿಯಿಲ್ಲ. ಅಲ್ಲಾಹು ನಿನಗೆ ಲಾಭವನ್ನು ಉದ್ದೇಶಿಸಿದ ಹೊರತು ಜನರು ನಿನಗೆ ಯಾವುದೇ ಲಾಭವನ್ನೂ ನೀಡಲಾರರು. ಅಲ್ಲಾಹು ನಿನಗೆ ಹಾನಿಯನ್ನು ಉದ್ದೇಶಿಸಿದ ಹೊರತು ಜನರು ನಿನಗೆ ಯಾವುದೇ ಹಾನಿಯನ್ನೂ ಮಾಡಲಾರರು. ಆದ್ದರಿಂದ ಓ ವಿಶ್ವಾಸಿಯೇ! ಅಲ್ಲಾಹನನ್ನು ಭಯಪಡು. ಜನರು ಕಾಣುವುದಕ್ಕೋಸ್ಕರ ಇಬಾದತ್ ಮಾಡದಿರು. ಯಾಕೆಂದರೆ ಅಲ್ಲಾಹನ ಅನುಮತಿಯ ಹೊರತು ಅವರು ನಿನಗೆ ಯಾವುದೇ ಲಾಭವನ್ನಾಗಲಿ ಹಾನಿಯನ್ನಾಗಲಿ ಮಾಡಲಾರರು.

ವ್ಯವಹಾರಗಳಲ್ಲಿರುವ ಅಮಾನತ್ತಿನ ಬಗ್ಗೆ ಹೇಳುವುದಾದರೆ, ಜನರು ನಿನ್ನೊಂದಿಗೆ ಹೇಗೆ ವರ್ತಿಸಬೇಕೆಂದು ನೀನು ಇಷ್ಟಪಡುತ್ತೀಯೋ ಅದೇ ರೀತಿ ನೀನು ಜನರೊಂದಿಗೂ ವರ್ತಿಸಬೇಕೆಂಬುದು ಅದರ ಮೂಲತತ್ವವಾಗಿದೆ. ಈ ತತ್ವವನ್ನು ಸ್ವೀಕರಿಸಿ ಜನರೊಂದಿಗೆ ವರ್ತಿಸುವಾಗ ಈ ತತ್ವಕ್ಕೆ ಬದ್ಧನಾಗಿರು. ಜನರು ನಿನ್ನೊಂದಿಗೆ ಹೇಗೆ ವರ್ತಿಸಬೇಕೆಂದು, ಹೇಗೆ ಉಪದೇಶ ನೀಡಬೇಕೆಂದು, ಹೇಗೆ ವಿವರಿಸಿಕೊಡಬೇಕೆಂದು ನೀನು ಇಷ್ಟಪಡುತ್ತೀಯೋ ಅದೇ ರೀತಿ ನೀನೂ ಅವರೊಂದಿಗೆ ವರ್ತಿಸು. ಅವರು ನಿನಗೆ ನಂಬಿಕೆಯಿಂದ ಅರ್ಪಿಸಿದ ಅವರ ಆರ್ಥಿಕ ಮತ್ತು ಆರ್ಥಿಕೇತರ ಹಕ್ಕುಗಳನ್ನು ಸಂರಕ್ಷಿಸು.

ಓ ವಿಶ್ವಾಸಿಗಳೇ! ಖಂಡಿತವಾಗಿಯೂ ಅಮಾನತ್ ಎಂಬುದು ಹಲವಾರು ಸ್ಥಳಗಳಲ್ಲಿ ಬರುತ್ತದೆ. ಅಮಾನತ್ ಪತಿಪತ್ನಿಯರ ಮಧ್ಯೆಯಿರುತ್ತದೆ. ಆದ್ದರಿಂದ ಪತಿಪತ್ನಿಯರು ಪರಸ್ಪರ ಅವರ ಸಂಪತ್ತುಗಳನ್ನು ಮತ್ತು ರಹಸ್ಯಗಳನ್ನು ಸಂರಕ್ಷಿಸಬೇಕಾಗಿದೆ. ಅವರು ಪರಸ್ಪರರ ರಹಸ್ಯಗಳನ್ನು ಅನ್ಯರಿಗೆ ಬಹಿರಂಗಪಡಿಸಬಾರದು. ಪ್ರವಾದಿ(ﷺ)ರವರು ಹೇಳಿದರು:

«إِنَّ مِنْ شَرِّ النَّاسِ مَنْزِلَةً عِنْدَ اللَّهِ يَوْمَ الْقِيَامَةِ الرَّجُلَ يُفْضِي إِلَى امْرَأَتِهِ وَتُفْضِي إِلَيْهِ ثُمَّ يَنْشُرُ أَحَدُهُمَا سِرَّ صَاحِبِهِ»

"ಅಂತ್ಯದಿನದಂದು ಅಲ್ಲಾಹನ ಬಳಿ ಜನರಲ್ಲೇ ಅತಿನಿಕೃಷ್ಟ ಸ್ಥಾನವಿರುವ ವ್ಯಕ್ತಿ ಯಾರೆಂದರೆ, ಒಬ್ಬನು ತನ್ನ ಮಡದಿಯೊಂದಿಗೆ ಕೂಡಿ, ಆಕೆ ಅವನೊಂದಿಗೆ ಕೂಡಿ ತರುವಾಯ ಅವರಲ್ಲೊಬ್ಬರು ಇನ್ನೊಬ್ಬರ ರಹಸ್ಯವನ್ನು ಪ್ರಚಾರ ಮಾಡುವವನಾಗಿದ್ದಾನೆ."

ಅಮಾನತ್ ಗೆಳೆಯರ ಮಧ್ಯೆಯೂ ಇರುತ್ತದೆ. ಒಬ್ಬನು ತನ್ನ ಗೆಳೆಯನಿಗೆ ಒಂದು ರಹಸ್ಯವನ್ನು ಹೇಳುತ್ತಾನೆ. ಆ ರಹಸ್ಯ ಇತರ ಜನರಿಗೆ ತಿಳಿಸುವುದನ್ನು ಅವನು ಇಷ್ಟಪಡುವುದಿಲ್ಲ. ಆದರೆ ಈತ ಅದನ್ನು ಎಲ್ಲರಿಗೂ ಹೇಳುತ್ತಾನೆ. ಹದೀಸಿನಲ್ಲಿ ಹೀಗಿದೆ:

«إِذَا حَدَّثَ الرَّجُلُ رَجُلًا بِحَدِيثٍ ثُمَّ الْتَفَتَ فَإِنَّهُ أَمَانَةٌ»

"ಒಬ್ಬ ವ್ಯಕ್ತಿ ಇನ್ನೊಬ್ಬ ವ್ಯಕ್ತಿಗೆ ಏನಾದರೂ ಹೇಳಿ ತರುವಾಯ ತಿರುಗಿ ನೋಡಿದರೆ ಅದು ಅಮಾನತ್ ಆಗಿದೆ."

ಆ ಸುದ್ದಿಯು ಇತರರಿಗೆ ಗೊತ್ತಾಗುವುದು ಆತನಿಗೆ ಇಷ್ಟವಿಲ್ಲವೆಂಬುದಕ್ಕೆ ಆತ ತಿರುಗಿ ನೋಡುವುದೇ ಪುರಾವೆಯಾಗಿದೆ.

ಅಮಾನತ್ ಮಾರಾಟ ಖರೀದಿಗಳಲ್ಲೂ, ಬಾಡಿಗೆಗೆ ಕೊಡುವುದು ಮತ್ತು ಬಾಡಿಗೆಗೆ ಪಡೆಯುವುದರಲ್ಲೂ, ಗಿರವಿ ಮತ್ತು ಒತ್ತೆಗಳಲ್ಲೂ ಇದೆ. ಆದ್ದರಿಂದ ಅಳತೆಯಲ್ಲಿ, ತೂಕದಲ್ಲಿ, ಬೆಲೆಯನ್ನು ಏರಿಸಿ, ನ್ಯೂನತೆಗಳನ್ನು ಅಡಗಿಸಿ, ಗುಣಮಟ್ಟದಲ್ಲಿ ಗೊಂದಲಗೊಳಿಸಿ ಖರೀದಿದಾರನನ್ನು ವಂಚಿಸುವುದು ಮಾರಾಟಗಾರನಿಗೆ ಸಮ್ಮತಾರ್ಹವಲ್ಲ. ಅದೇ ರೀತಿ ಬೆಲೆಯನ್ನು ಕಡಿಮೆ ಕೊಟ್ಟು, ಅಥವಾ ನಿರಾಕರಿಸಿ, ಅಥವಾ ಪಾವತಿಸಲು ಸಾಧ್ಯವಿದ್ದೂ ತಡ ಮಾಡಿ ಮಾರಾಟಗಾರರನ್ನು ವಂಚಿಸುವುದು ಖರೀದಿದಾರನಿಗೂ ಸಮ್ಮತಾರ್ಹವಲ್ಲ. ಬಾಡಿಗೆಗೆ ಕೊಡುವವನು ತಾನು ಬಾಡಿಗೆಗೆ ಕೊಡುವ ವಸ್ತುವಿನ ನ್ಯೂನತೆಯನ್ನು ವಿವರಿಸದಿರುವುದು, ಬಾಡಿಗೆಗೆ ಪಡೆಯುವವನು ಬಾಡಿಗೆಯನ್ನು ಕಮ್ಮಿ ಪಾವತಿ ಮಾಡುವುದು ಅಥವಾ ಬಾಡಿಗೆ ಕೊಡದಿರುವುದು ಅಥವಾ ತಾನು ಬಾಡಿಗೆಗೆ ಪಡೆದ ಮನೆ, ಅಂಗಡಿ, ಯಂತ್ರ ಅಥವಾ ವಾಹನಕ್ಕೆ ಹಾನಿ ಮಾಡುವುದು ಸಮ್ಮತಾರ್ಹವಲ್ಲ.

ಗಿರವಿಯಿಡುವವನು ಮತ್ತು ಗಿರವಿ ಪಡೆಯುವವನು ತಮ್ಮ ತಮ್ಮ ಅಮಾನತ್‌ಗಳನ್ನು ನೆರವೇರಿಸಬೇಕಾದುದು ಕಡ್ಡಾಯವಾಗಿದೆ. ಗಿರವಿಯಿಡುವವನು ತಾನು ಗಿರವಿಯಿಟ್ಟ ವಸ್ತುವನ್ನು ಅಥವಾ ಅದರ ಒಂದು ಭಾಗವನ್ನು ಗಿರವಿಗಾರನಿಗೆ ತಿಳಿಸದೆ ಮಾರಾಟ ಮಾಡುವುದರ ಮೂಲಕ ಅವನನ್ನು ವಂಚಿಸಬಾರದು.

ಏಜೆನ್ಸಿಗಳಲ್ಲೂ ಆಡಳಿತದಲ್ಲೂ ಅಮಾನತ್ ಎಂಬುದಿದೆ. ಏಜೆನ್ಸಿದಾರನು ಅವನಿಗೆ ಸಾಮಗ್ರಿ ನೀಡುವವನೊಂದಿಗೆ ಅತ್ಯುತ್ತಮವಾಗಿ ವ್ಯವಹರಿಸುವುದು ಕಡ್ಡಾಯವಾಗಿದೆ. ಅವನ ಸಾಮಗ್ರಿಯನ್ನು ಮಾರುವ ಮೂಲಕ ಅಥವಾ ಅದನ್ನು ಕಡಿಮೆ ಬೆಲೆಗೆ ಮಾರುವ ಮೂಲಕ ಅವನನ್ನು ವಂಚಿಸುವುದು ಸಮ್ಮತಾರ್ಹವಲ್ಲ.

ಆಡಳಿತದಲ್ಲಿರುವ ಅಮಾನತ್ ಏನೆಂದರೆ ಯಾರು ಆಡಳಿತಗಾರನಾಗಿರುತ್ತಾನೋ ಅವನು ತನ್ನ ಅಮಾನತ್ತನ್ನು ನೆರವೇರಿಸುವುದಾಗಿದೆ. ನ್ಯಾಯಾಧೀಶನು, ನಾಯಕನು, ಮುಖಂಡರು, ನಿರ್ವಾಹಕರು ಮುಂತಾದವರೆಲ್ಲರೂ ಅಮಾನತ್ ವಹಿಸಲ್ಪಟ್ಟವರಾಗಿದ್ದಾರೆ. ಅವರು ತಮ್ಮ ಆಡಳಿತಕ್ಕೆ ಸಂಬಂಧಿಸಿದ ವಿಷಯಗಳಲ್ಲಿ ಅವರಿಗೆ ಸಾಧ್ಯವಾಗುವಷ್ಟು ಅತ್ಯುತ್ತಮವಾದ ರೂಪದಲ್ಲಿ ತಮ್ಮ ಅಮಾನತ್ತನ್ನು ನೆರವೇರಿ

ಕೊನೆಯ ಪುಟಕ್ಕೆ

# ಮುಸ್ಲಿಮನಿಗೆ ಮುಸ್ಲಿಮನ ಮೇಲಿರುವ ಆರು ಹಕ್ಕುಗಳು

ಅಶ್ಶೈಖ್ ಅಬ್ದುರ್ರಹ್ಮಾನ್ ಇಬ್ನ್ ನಾಸಿರ್ ಅಸ್ಸಅ್‌ದೀ (ರಹಿಮಹುಲ್ಲಾಹ್)

عَنْ أَبِي هُرَيْرَةَ رَضِيَ اللَّهُ عَنْهُ قَالَ: قَالَ رَسُولُ اللَّهِ صَلَّى اللَّهُ عَلَيْهِ وَسَلَّمَ: «حَقُّ الْمُسْلِمِ عَلَى الْمُسْلِمِ سِتٌّ». قِيلَ: مَا هُنَّ يَا رَسُولَ اللَّهِ؟ قَالَ: «إِذَا لَقِيتَهُ فَسَلِّمْ عَلَيْهِ، وَإِذَا دَعَاكَ فَأَجِبْهُ، وَإِذَا اسْتَنْصَحَكَ فَانْصَحْ لَهُ، وَإِذَا عَطَسَ فَحَمِدَ اللَّهَ فَشَمِّتْهُ، وَإِذَا مَرِضَ فَعُدْهُ، وَإِذَا مَاتَ فَاتَّبِعْهُ».

ಅಬೂ ಹುರೈರಾ(رضي الله عنه)ರಿಂದ ವರದಿ. ಪ್ರವಾದಿ(ﷺ)ರವರು ಹೇಳಿದರು: "ಮುಸ್ಲಿಮನಿಗೆ ಮುಸ್ಲಿಮನ ಮೇಲೆ ಆರು ಹಕ್ಕುಗಳಿವೆ." ಅವು ಯಾವುದೆಂದು ಕೇಳಲಾದಾಗ ಪ್ರವಾದಿ(ﷺ)ರವರು ಹೇಳಿದರು: "ನೀನು ಅವನನ್ನು ಸಂಧಿಸಿದರೆ ಅವನಿಗೆ ಸಲಾಮ್ ಹೇಳು, ಅವನು ನಿನ್ನನ್ನು ಕರೆದರೆ ಅವನಿಗೆ ಉತ್ತರ ನೀಡು, ಅವನು ನಿನ್ನೊಂದಿಗೆ ಸಲಹೆ ಕೇಳಿದರೆ ಅವನಿಗೆ ಸಲಹೆ ನೀಡು, ಅವನು ಸೀನಿದ ಬಳಿಕ ಅಲ್ಲಾಹನನ್ನು ಸ್ತುತಿಸಿದರೆ ಅವನಿಗೆ ತಶ್ಮೀತ್ ಹೇಳು, ಅವನು ರೋಗಿಯಾದರೆ ಅವನನ್ನು ಸಂದರ್ಶಿಸು ಮತ್ತು ಅವನು ಮೃತಪಟ್ಟರೆ ಅವನನ್ನು ಹಿಂಬಾಲಿಸು." [ಸಹೀಹ್ ಮುಸ್ಲಿಮ್]

ಮುಸ್ಲಿಮನಿಗೆ ಮುಸ್ಲಿಮನ ಮೇಲಿರುವ ಈ ಆರು ಹಕ್ಕುಗಳನ್ನು ಯಾರಾದರೂ ತೀರಿಸಿದರೆ ಇದಲ್ಲದ ಬೇರೆ ಹೊಣೆಗಳನ್ನು ನಿರ್ವಹಿಸುವುದು ಕೂಡ ಹೆಚ್ಚು ಪ್ರಾಮುಖ್ಯತೆಯುಳ್ಳದ್ದಾಗುತ್ತವೆ. ಈ ಹಕ್ಕುಗಳನ್ನು ತೀರಿಸುವ ಮೂಲಕ, ಅಲ್ಲಾಹು ಅತ್ಯಧಿಕ ಒಳಿತು ಮತ್ತು ಅಪಾರ ಪುಣ್ಯವನ್ನಿಟ್ಟಿರುವ ಇತರ ಹಕ್ಕುಗಳನ್ನು ಹಾಗೂ ಹೊಣೆಗಳನ್ನು ನೆರವೇರಿಸುವುದು ಸಾಧ್ಯವಾಗುತ್ತದೆ.

## ಮೊದಲನೆಯ ಹಕ್ಕು:

"ನೀನು ಅವನನ್ನು ಸಂಧಿಸಿದರೆ ಅವನಿಗೆ ಸಲಾಮ್ ಹೇಳು."

ಖಂಡಿತವಾಗಿಯೂ ಸಲಾಮ್ ಎಂಬುದು ಪ್ರೀತಿಗಿರುವ ಕಾರಣವಾಗಿದೆ. ಪ್ರೀತಿಸುವುದು ವಿಶ್ವಾಸಕ್ಕೆ ಅನಿವಾರ್ಯವಾಗಿದೆ. ವಿಶ್ವಾಸವು ಸ್ವರ್ಗ ಪ್ರವೇಶಕ್ಕೆ ಅನಿವಾರ್ಯವಾಗಿದೆ. ಪ್ರವಾದಿ (ﷺ)ರವರು ಹೇಳಿದರು:

«وَالَّذِي نَفْسِي بِيَدِهِ، لَا تَدْخُلُوا الْجَنَّةَ حَتَّى تُؤْمِنُوا، وَلَا تُؤْمِنُونَ حَتَّى تَحَابُّوا، أَفَلَا أَدُلُّكُمْ عَلَى شَيْءٍ إِذَا فَعَلْتُمُوهُ تَحَابَبْتُمْ، أَفْشُوا السَّلَامَ بَيْنَكُمْ»

"ನನ್ನ ಆತ್ಮ ಯಾರ ಕೈಯಲ್ಲಿದೆಯೋ ಅವನ ಮೇಲಾಣೆ, ನೀವು ವಿಶ್ವಾಸವಿಡುವ ತನಕ ನೀವು ಸ್ವರ್ಗವನ್ನು ಪ್ರವೇಶಿಸಲಾರಿರಿ, ನೀವು ಪರಸ್ಪರ ಪ್ರೀತಿಸುವ ತನಕ ನೀವು ವಿಶ್ವಾಸವಿಡಲಾರಿರಿ. ನಾನೊಂದು ವಿಷಯವನ್ನು ನಿಮಗೆ ಸೂಚಿಸಲೇ? ಅದನ್ನು ಮಾಡಿದರೆ ನೀವು ಪರಸ್ಪರ ಪ್ರೀತಿಸುವವರಾಗುವಿರಿ. ನೀವು ನಿಮ್ಮ ಮಧ್ಯೆ ಸಲಾಮನ್ನು ವ್ಯಾಪಕಗೊಳಿಸಿರಿ."

ಸಲಾಮ್ ಹೇಳುವುದು ಇಸ್ಲಾಮಿನ ಸದ್ಗುಣಗಳಲ್ಲಿ ಸೇರಿದ್ದಾಗಿದೆ. ಯಾಕೆಂದರೆ ಇಬ್ಬರು ವ್ಯಕ್ತಿಗಳು ಪರಸ್ಪರ ಸಂಧಿಸುವಾಗ ಒಬ್ಬನು ಇನ್ನೊಬ್ಬನಿಗೆ ಅವನನ್ನು ಕೆಡುಕಿನಿಂದ ಪಾರು ಮಾಡಲು ಮತ್ತು ಎಲ್ಲ ವಿಧ ಒಳಿತುಗಳನ್ನು ತರುವ ರಹ್ಮತ್ ಹಾಗೂ ಬರಕತ್ ಲಭ್ಯವಾಗಲು ಪ್ರಾರ್ಥಿಸುತ್ತಾನೆ. ಇದರ ಬಳಿಕ ಅವನು ಮಂದಹಾಸ ಬೀರುತ್ತಾನೆ ಮತ್ತು ಸಂದರ್ಭಕ್ಕೆ ತಕ್ಕ ಉತ್ತಮ ಮಾತುಗಳನ್ನಾಡುತ್ತಾನೆ. ಇದು ಅವರಿಬ್ಬರ ನಡುವಿನ ಸಂಬಂಧವನ್ನು ಮತ್ತು ಪ್ರೀತಿಯನ್ನು ಬೆಸೆಯುತ್ತದೆ ಹಾಗೂ ಅವರಿಬ್ಬರ ಅಪರಿಚಿತತೆ ಹಾಗೂ ಸಂಬಂಧ ಕಡಿಯುವಿಕೆಯನ್ನು ನಿವಾರಿಸುತ್ತದೆ.

ಆದ್ದರಿಂದ ಸಲಾಮ್ ಎಂಬುದು ಮುಸ್ಲಿಮನ ಹಕ್ಕಾಗಿದೆ. ಸಲಾಮನ್ನು ತದ್ರೂಪವಾಗಿ ಅಥವಾ ಅದಕ್ಕಿಂತಲೂ ಉತ್ತಮವಾಗಿ ಮರಳಿಸುವುದು ಕಡ್ಡಾಯವಾಗಿದೆ. ಮೊಟ್ಟಮೊದಲು ಸಲಾಮ್ ಹೇಳುವವನು ಜನರಲ್ಲೇ ಅತ್ಯುತ್ತಮನಾಗಿದ್ದಾನೆ.

## ಎರಡನೆಯ ಹಕ್ಕು:

"ಅವನು ನಿನ್ನನ್ನು ಕರೆದರೆ ಅವನಿಗೆ ಉತ್ತರ ನೀಡು."

ಅಂದರೆ ಅವನು ನಿನ್ನನ್ನು ಆಹಾರ ಅಥವಾ ಪಾನೀಯ ಸೇವಿಸಲು ಆಹ್ವಾನಿಸಿದರೆ ನಿನ್ನನ್ನು ಸಮೀಪಿಸಿದ ಮತ್ತು ಆಹ್ವಾನ ನೀಡುವ ಮೂಲಕ ನಿನ್ನನ್ನು ಗೌರವಿಸಿದ ನಿನ್ನ ಸಹೋದರನ ಆಸೆಯನ್ನು ನೆರವೇರಿಸು. ನಿನಗೆ ಯಾವುದೇ ನೆಪವಿಲ್ಲದಿದ್ದರೆ ಅವನ ಆಹ್ವಾನಕ್ಕೆ ಓಗೊಡು.

## ಮೂರನೆಯ ಹಕ್ಕು:

"ಅವನು ನಿನ್ನೊಂದಿಗೆ ಸಲಹೆ ಕೇಳಿದರೆ ಅವನಿಗೆ ಸಲಹೆ ನೀಡು."

ಅಂದರೆ ಯಾವುದಾದರೊಂದು ಕೆಲಸದ ಬಗ್ಗೆ ಅದನ್ನು ಮಾಡಬಹುದೇ ಅಥವಾ ಮಾಡಬಾರದೇ ಎಂದು ಅವನು ನಿನ್ನೊಂದಿಗೆ ಅಭಿಪ್ರಾಯ ಕೇಳಿದರೆ ನೀನು ನಿನ್ನ ಸ್ವಂತಕ್ಕಾಗಿ ಯಾವ ಅಭಿಪ್ರಾಯವನ್ನು ಇಷ್ಟಪಡುತ್ತೀಯೋ ಅದನ್ನೇ ಅವನಿಗೂ ಹೇಳು. ಆ ಕೆಲಸವು ಎಲ್ಲ ವಿಧಗಳಲ್ಲೂ ಪ್ರಯೋಜನಕರವಾಗಿದ್ದರೆ ಅದಕ್ಕಾಗಿ ಅವನನ್ನು ಪ್ರೋತ್ಸಾಹಿಸು. ಅದು ಹಾನಿಕರವಾಗಿದ್ದರೆ ಅವನನ್ನು ಎಚ್ಚರಿಸು. ಅದು ಪ್ರಯೋಜನ ಮತ್ತು ಹಾನಿಯೆರಡನ್ನೂ ಒಳಗೊಂಡಿದ್ದರೆ ಅದನ್ನು ಅವನಿಗೆ ವಿವರಿಸಿ ಕೊಡು ಮತ್ತು ಪ್ರಯೋಜನ ಹಾಗೂ ಹಾನಿಗಳನ್ನು ತೂಗಿ ನೋಡು. ಅದೇ ರೀತಿ ಬೇರೊಬ್ಬ ವ್ಯಕ್ತಿಯ ವ್ಯವಹಾರದ ಬಗ್ಗೆ ಅವನು ನಿನ್ನೊಂದಿಗೆ ಅಭಿಪ್ರಾಯ ಕೇಳಿದರೆ, ಅಥವಾ ಮದುವೆ ಮಾಡಿಸುವ ಯಾ ಮದುವೆಯಾಗುವ ವಿಷಯದಲ್ಲಿ ಅವನು ನಿನ್ನೊಂದಿಗೆ ಅಭಿಪ್ರಾಯ ಕೇಳಿದರೆ ಅವನಿಗೆ ಶುದ್ಧವಾದ ಮತ್ತು ಪ್ರಾಮಾಣಿಕವಾದ ಅಭಿಪ್ರಾಯವನ್ನು ಹೇಳು. ನೀನು ನಿನ್ನ ಸ್ವಂತ ವಿಷಯದಲ್ಲಿ ಯಾವ ಅಭಿಪ್ರಾಯವನ್ನು ತಾಳುತ್ತೀಯೋ ಅದೇ ಅಭಿಪ್ರಾಯವನ್ನು ಅವನಿಗೂ ಹೇಳು. ಆದರೆ ಯಾವುದೇ ವಿಷಯದಲ್ಲಾದರೂ ಅವನನ್ನು ನೀನು ವಂಚಿಸುವುದರ ಬಗ್ಗೆ ಎಚ್ಚರಿಕೆ ವಹಿಸು. ಯಾಕೆಂದರೆ ಮುಸ್ಲಿಮರನ್ನು ವಂಚಿಸುವವನು ಮುಸ್ಲಿಮರಲ್ಲಿ ಸೇರಿದವನಲ್ಲ. ಮಾತ್ರವಲ್ಲ, ಅವನು ಪ್ರಾಮಾಣಿಕವಾಗಿ ಸಲಹೆ ನೀಡುವ ಕಡ್ಡಾಯವನ್ನು ತೊರೆದವನಾಗುತ್ತಾನೆ.

ಪ್ರಾಮಾಣಿಕವಾಗಿ ಸಲಹೆ ನೀಡುವುದು ಅನಿರ್ಬಂಧಿತವಾದ ಕಡ್ಡಾಯವಾಗಿದೆ. ಅವನು ನಿನ್ನೊಂದಿಗೆ ಪ್ರಾಮಾಣಿಕವಾದ ಸಲಹೆಯನ್ನು ಮತ್ತು ಪ್ರಯೋಜನಕರವಾದ ಅಭಿಪ್ರಾಯವನ್ನು ಕೇಳುವವನಾದರೆ ಈ ಕಡ್ಡಾಯವು ಇನ್ನಷ್ಟು ಮಹತ್ವವುಳ್ಳದ್ದಾಗುತ್ತದೆ. ಆದ್ದರಿಂದಲೇ ಪ್ರವಾದಿ (ﷺ)ರವರು ಈ ವಿಷಯವನ್ನು ಈ ಮಹತ್ವಪೂರ್ಣ ಹಕ್ಕುಗಳಲ್ಲಿ ಸೇರಿಸಿದ್ದಾರೆ. ಧರ್ಮವು ಪ್ರಾಮಾಣಿಕತೆಯಾಗಿದೆ ಎಂಬ ಹದೀಸಿನ ವ್ಯಾಖ್ಯಾನದಲ್ಲಿ ನಾನಿದನ್ನು ವಿವರಿಸಿದ್ದೇನೆ. ಅದನ್ನು ಇಲ್ಲಿ ಪುನರಾವರ್ತಿಸುವುದರಲ್ಲಿ ಯಾವುದೇ ಪ್ರಯೋಜನವೂ ಇರಲಾರದು.

## ನಾಲ್ಕನೆಯ ಹಕ್ಕು:

"ಅವನು ಸೀನಿದ ಬಳಿಕ ಅಲ್ಲಾಹನನ್ನು ಸ್ತುತಿಸಿದರೆ ಅವನಿಗೆ ತಶ್ಮೀತ್ ಹೇಳು."

ಯಾಕೆಂದರೆ ಸೀನುವುದು ಅಲ್ಲಾಹನ ಅನುಗ್ರಹವಾಗಿದೆ. ಇದರಿಂದಾಗಿ ಮನುಷ್ಯನ ಶರೀರದೊಳಗೆ ಕಟ್ಟಿ ನಿಂತ ವಾಯು ಹೊರಬರುತ್ತದೆ. ಒಂದು ದ್ವಾರವನ್ನು ಉಂಟು ಮಾಡುವ ಮೂಲಕ ಈ ವಾಯು ಹೊರಹೋಗಲು ಅಲ್ಲಾಹು ಸುಲಭೀಕರಿಸುತ್ತಾನೆ. ಇದರಿಂದಾಗಿ ಸೀನಿದವನು ನಿರಾಳನಾಗುತ್ತಾನೆ. ಆದ್ದರಿಂದ ಈ ಅನುಗ್ರಹಕ್ಕಾಗಿ ಅಲ್ಲಾಹನನ್ನು ಸ್ತುತಿಸುವುದನ್ನು ಅಲ್ಲಾಹು ಶರೀಅತ್ ಆಗಿ ಮಾಡಿದ್ದಾನೆ. ಇದನ್ನು ಆಲಿಸಿದ ಅವನ ಮುಸ್ಲಿಮ್ ಸಹೋದರನು 'ಯರ್‌ಹಮುಕಲ್ಲಾಹು' ಎಂದು ಹೇಳುವುದನ್ನೂ ಶರೀಅತ್ ಆಗಿ ಮಾಡಿದ್ದಾನೆ. ಇದನ್ನು ಸೀನಿದವನು ಆಲಿಸಿದರೆ ಅವನು 'ಯಹ್ದೀಕುಮುಲ್ಲಾಹು ವಯುಸ್ಲಿಹು ಬಾಲಕುಮ್' ಎಂದು ಹೇಳಬೇಕಾಗಿದೆ. ಆದರೆ ಯಾರು ಸೀನಿದ ಬಳಿಕ ಅಲ್ಲಾಹನನ್ನು ಸ್ತುತಿಸುವುದಿಲ್ಲವೋ ಅವನು ಇತರರಿಂದ ತಶ್ಮೀತ್ ಹೇಳಿಸಲು ಅರ್ಹಪಡುವುದಿಲ್ಲ. ಆದ್ದರಿಂದ ಅವನು ಅದಕ್ಕಾಗಿ ತನ್ನನ್ನೇ ಹೊರತು ಯಾರನ್ನೂ ದೂಷಿಸಬೇಕಾಗಿಲ್ಲ. ಅವನು ತನಗೋಸ್ಕರ ಲಭ್ಯವಾಗುವ ಎರಡು ಅನುಗ್ರಹಗಳನ್ನು ಕಳೆದುಕೊಳ್ಳುತ್ತಾನೆ. ಒಂದು: ಅಲ್‌ಹಮ್ದುಲಿಲ್ಲಾಹ್ ಎಂದು ಹೇಳುವ ಅನುಗ್ರಹ. ಇನ್ನೊಂದು: ತನ್ನ ಸಹೋದರನು ತನಗಾಗಿ ಪ್ರಾರ್ಥಿಸುವ ಅನುಗ್ರಹ.

## ಐದನೆಯ ಹಕ್ಕು:

"ಅವನು ರೋಗಿಯಾದರೆ ಅವನನ್ನು ಸಂದರ್ಶಿಸು."

ರೋಗಿಯನ್ನು ಸಂದರ್ಶಿಸುವುದು ಮುಸ್ಲಿಮರ ಹಕ್ಕಾಗಿದೆ. ಇನ್ನು ಆ ರೋಗಿಯು ಸಂಬಂಧಿಕ, ಗೆಳೆಯ ಮುಂತಾದವರಾಗಿದ್ದರೆ ಈ ಹಕ್ಕು ಇನ್ನಷ್ಟು ಮಹತ್ವವನ್ನು ಪಡೆಯುತ್ತದೆ. ಅದು ಶ್ರೇಷ್ಠವಾದ ಸತ್ಕರ್ಮವಾಗಿದೆ. ಯಾರಾದರೂ ಮುಸ್ಲಿಮನಾದ ತನ್ನ ಸಹೋದರನನ್ನು ಸಂದರ್ಶಿಸಿದರೆ ಅವನು ರಹ್ಮತ್‌ನಲ್ಲಿ ಪ್ರವೇಶಿಸಿದವನಾಗುತ್ತಾನೆ. ಅವನು ಅವನ ಬಳಿ ಕುಳಿತಾಗ ರಹ್ಮತ್ ಅವನನ್ನು ಆವರಿಸುತ್ತದೆ. ಅವನು ದಿನದ ಆರಂಭದಲ್ಲಿ ಅವನನ್ನು ಸಂದರ್ಶಿಸಿದರೆ ಸಂಜೆಯ ತನಕ ಮಲಕ್‌ಗಳು ಅವನಿಗಾಗಿ ಪ್ರಾರ್ಥಿಸುತ್ತಾರೆ. ಅವನು ದಿನದ ಕೊನೆಯಲ್ಲಿ ಸಂದರ್ಶಿಸಿದರೆ ಬೆಳಗ್ಗಿನ ತನಕ ಮಲಕ್‌ಗಳು ಅವನಿಗಾಗಿ ಪ್ರಾರ್ಥಿಸುತ್ತಾರೆ. ಸಂದರ್ಶಿಸುವವನು ರೋಗಿಯ ಉಪಶಮನಕ್ಕಾಗಿ ಪ್ರಾರ್ಥಿಸಬೇಕಾಗಿದೆ. ಅವನಿಗೆ ನೆಮ್ಮದಿಯುಂಟಾಗುವಂತೆ ಮಾಡಬೇಕಾಗಿದೆ. ಅವನ ಮನಸ್ಸಿನಲ್ಲಿ ಶುಭವಾರ್ತೆ ಮತ್ತು ಆರೋಗ್ಯವನ್ನು ತುಂಬಬೇಕಾಗಿದೆ. ಅಲ್ಲಾಹನೆಡೆಗೆ ತೌಬಾ ಮಾಡುವುದನ್ನು ಮತ್ತು ಪ್ರಯೋಜನಕರವಾದ ವಸಿಯ್ಯತ್ ಮಾಡುವುದನ್ನು ನೆನಪಿಸಿಕೊಡಬೇಕಾಗಿದೆ. ಆದರೆ ಬಹಳ ಹೊತ್ತು ಅವನ ಬಳಿ ಕೂರಬಾರದು. ಬದಲಾಗಿ ಸಂದರ್ಶನವೆಂಬ ಹಕ್ಕನ್ನು ತೀರಿಸುವಷ್ಟು ಸಮಯ ಮಾತ್ರ ಕೂರಬೇಕಾಗಿದೆ. ತಾನು ಹೆಚ್ಚು ಹೆಚ್ಚು ಸಂದರ್ಶಿಸುವುದು ಮತ್ತು ಹೆಚ್ಚು ಹೊತ್ತು ಅಲ್ಲಿ ಕೂರುವುದು ರೋಗಿಯ ಮೇಲೆ ಉತ್ತಮ ಪರಿಣಾಮ ಬೀರುವುದಾದರೆ ಪರವಾಗಿಲ್ಲ. ಯಾಕೆಂದರೆ ಪ್ರತಿಯೊಂದು ಸ್ಥಳಕ್ಕೂ ಅದರದ್ದೇ ಆದ ನಿಬಂಧನೆಗಳಿರುತ್ತವೆ.

## ಆರನೆಯ ಹಕ್ಕು:

"ಅವನು ಮೃತಪಟ್ಟರೆ ಅವನನ್ನು ಹಿಂಬಾಲಿಸು."

ಯಾಕೆಂದರೆ ಜನಾಝ ನಮಾಝಿನ ತನಕ ಯಾರಾದರೂ ಮೃತದೇಹವನ್ನು ಹಿಂಬಾಲಿಸಿದರೆ ಅವನಿಗೆ ಒಂದು ಕೀರಾತ್ (ಒಂದು ಕೀರಾತ್ ಎಂದರೆ ಉಹುದ್ ಪರ್ವತದಷ್ಟು ಪುಣ್ಯ) ಪುಣ್ಯವಿದೆ. ಯಾರಾದರೂ ದಫನ ಮಾಡುವ ತನಕ ಹಿಂಬಾಲಿಸಿದರೆ ಅವನಿಗೆ ಎರಡು ಕೀರಾತ್ ಪುಣ್ಯವಿದೆ. ಮೃತದೇಹವನ್ನು ಹಿಂಬಾಲಿಸುವುದು ಅಲ್ಲಾಹನಿಗಿರುವ ಹಕ್ಕಾಗಿದೆ, ಮೃತದೇಹಕ್ಕಿರುವ ಹಕ್ಕಾಗಿದೆ ಮತ್ತು ಮೃತಪಟ್ಟವನ ಜೀವಂತ ಸಂಬಂಧಿಕರಿಗಿರುವ ಹಕ್ಕಾಗಿದೆ.

[ಬಹ್ಜತು ಕುಲೂಬಿಲ್ ಅಬ್ರಾರ್ ವಕುರ್ರತು ಉಯೂನಿಲ್ ಅಖ್ಯಾರ್ ಫೀ ಶರ್ಹಿ ಜವಾಮಿಇಲ್ ಅಖ್ಬಾರ್ – ಹದೀಸ್ ನಂ. 29] ■

# ಅಮಾನತ್‌ಗಳನ್ನು ನೆರವೇರಿಸಿರಿ

10ನೆ ಪುಟದಿಂದ

ಸುವುದು ಕಡ್ಡಾಯವಾಗಿದೆ. ಅನಾಥರ ಪೋಷಕರು, ವಕ್‌ಫ್ ಸೊತ್ತುಗಳನ್ನು ನೋಡಿಕೊಳ್ಳುವವರು, ವಸಿಯ್ಯತ್ ವಹಿಸಲ್ಪಟ್ಟವರು ಎಲ್ಲರೂ ಅಮಾನತ್ ವಹಿಸಲ್ಪಟ್ಟವರಾಗಿದ್ದಾರೆ. ಅವರು ಅದನ್ನು ಅತ್ಯುತ್ತಮವಾದ ರೀತಿಯಲ್ಲಿ ನಿರ್ವಹಿಸುವುದು ಕಡ್ಡಾಯವಾಗಿದೆ. ಅವರು ಹಾಗೆ ಮಾಡದಿದ್ದರೆ ಪುನರುತ್ಥಾನ ದಿನದಂದು ಅವರೊಂದಿಗೆ ಅವುಗಳ ಬಗ್ಗೆ ವಿಚಾರಿಸಲಾಗುವುದು. ಅಂತ್ಯದಿನದಂದು ಪ್ರತಿಯೊಬ್ಬ ವಂಚಕನೂ ಜನರ ಮುಂದೆ ನಿಂತು ಒಂದೊಂದು ಧ್ವಜವನ್ನು ಹೊತ್ತುಕೊಂಡಿರುವನು. ಆಗ ಇದು ಇಂತಿಂತಹವನ ಮಗನಾದ ಇಂತಿಂತಹವನು ವಂಚಿಸಿದ್ದಾಗಿದೆ ಎನ್ನಲಾಗುವುದು.

ಆದ್ದರಿಂದ ಓ ಮುಸ್ಲಿಮರೇ! ಅಲ್ಲಾಹನನ್ನು ಭಯಪಡಿರಿ. ನಿಮ್ಮ ಕೈಯಲ್ಲಿರುವ ಅಮಾನತ್‌ಗಳ ಬಗ್ಗೆ ಆಲೋಚಿಸಿರಿ. ಯಾವುದನ್ನು ನಿಮಗೆ ವಹಿಸಿಕೊಡಲಾಗಿದೆಯೋ ಅವುಗಳ ಬಗ್ಗೆ ಆಲೋಚಿಸಿರಿ. ಇವೆಲ್ಲವುಗಳ ಬಗ್ಗೆ ಆಲೋಚಿಸಿರಿ ಮತ್ತು ಅಲ್ಲಾಹು ಆಜ್ಞಾಪಿಸಿದಂತೆ ಅಮಾನತ್‌ಗಳನ್ನು ನೆರವೇರಿಸಿರಿ.

﴿ إِنَّ ٱللَّهَ يَأۡمُرُكُمۡ أَن تُؤَدُّواْ ٱلۡأَمَٰنَٰتِ إِلَىٰٓ أَهۡلِهَا ﴾

“ನಂಬಿಕೆಯೊಂದಿಗೆ ವಹಿಸಿಕೊಡಲಾದ ಅಮಾನತ್ತುಗಳನ್ನು ಅವುಗಳ ಹಕ್ಕುದಾರರಿಗೆ ಕೊಡಬೇಕೆಂದು ಅಲ್ಲಾಹು ನಿಮ್ಮೊಂದಿಗೆ ಆಜ್ಞಾಪಿಸುತ್ತಿರುವನು.” [ಕುರ್‌ಆನ್ 4:58]

ಆದರೆ ಸಂಸ್ಕೃತಿ, ಶಿಕ್ಷಣ ಮತ್ತು ಬೋಧನೆಗೆ ಸಂಬಂಧಿಸಿದ ವಿಷಯಗಳಲ್ಲಿರುವ ಅಮಾನತ್‌ಗಳು ಬಹಳ ಗಂಭೀರವಾಗಿವೆ. ಆದ್ದರಿಂದ ಶಿಕ್ಷಣ ವಿಧಾನಗಳನ್ನು ಸಿದ್ಧಪಡಿಸುವವರು, ಶೈಕ್ಷಣಿಕ ವಿಭಾಗದ ನಿರ್ವಾಹಕರು ಮತ್ತು ಮೇಲ್ವಿಚಾರಕರು ಉತ್ತಮವಾದ ಶಿಕ್ಷಣ ವಿಧಾನವನ್ನು ಆರಿಸುವ ಮೂಲಕ, ಸಜ್ಜನರಾದ, ಸುಧಾರಣೆ ಮಾಡುವವರಾದ ಅಧ್ಯಾಪಕರನ್ನು ನೇಮಿಸುವ ಮೂಲಕ, ವಿದ್ಯಾರ್ಥಿಗಳನ್ನು ಜ್ಞಾನ ಮತ್ತು ಕರ್ಮದಲ್ಲಿ, ದೀನ್ ಮತ್ತು ದುನ್ಯಾದಲ್ಲಿ, ಇಬಾದತ್ ಮತ್ತು ಸ್ವಭಾವದಲ್ಲಿ ಅತ್ಯುತ್ತಮ ರೀತಿಯಲ್ಲಿ ಸಂಸ್ಕರಿಸುವ ಮೂಲಕ ತಮ್ಮ ಅಮಾನತ್‌ಗಳನ್ನು ನೆರವೇರಿಸಬೇಕಾಗಿದೆ.

ಶೈಕ್ಷಣಿಕ ವಿಷಯಗಳನ್ನು ಕಲಿಸುವವರು ಪಾಠಗಳಲ್ಲಿ ಪ್ರಮಾದ ಮತ್ತು ಇಸ್ಲಾಮೀ ವಿರುದ್ಧ ವಿಷಯಗಳಿವೆಯೋ ಎಂದು ಪರಿಶೋಧಿಸಬೇಕಾಗಿದೆ. ಯಾಕೆಂದರೆ ಕೆಲವೊಮ್ಮೆ ಪಠ್ಯಗಳಲ್ಲಿ ಪ್ರಮಾದಗಳು ಸಂಭವಿಸುವುದು ಸಹಜ. ಕೆಲವೊಮ್ಮೆ ಈ ಪ್ರಮಾದಗಳು ಘೋರವಾಗಿರಬಹುದು ಅಥವಾ ಅದಕ್ಕಿಂತ ಕೆಳಗಿನದ್ದಾಗಿರಬಹುದು. ಅಧ್ಯಾಪಕರು ಈ ವಿಷಯದಲ್ಲಿ ಅಮಾನತ್ ವಹಿಸಲ್ಪಟ್ಟವರಾಗಿದ್ದಾರೆ. ಪಠ್ಯಗಳಲ್ಲಿ ಇಸ್ಲಾಮ್ ಧರ್ಮಕ್ಕೆ ವಿರುದ್ಧವಾಗಿರುವ ಅಥವಾ ಇಸ್ಲಾಮೀ ಅಕೀದಃಕ್ಕೆ ವಿರುದ್ಧವಾಗಿರುವ ಏನನ್ನಾದರೂ ಕಂಡರೆ ಅವರು ತಕ್ಷಣ ಅದನ್ನು ಪ್ರಾಂಶುಪಾಲರಿಗೆ ತಿಳಿಸಬೇಕು. ಪ್ರಾಂಶುಪಾಲರು ಅದನ್ನು ಸಂಬಂಧಪಟ್ಟ ಅಧಿಕಾರಿಗಳಿಗೆ ತಿಳಿಸಬೇಕು. ಹೀಗೆ ಅವರೆಲ್ಲರೂ ಒಳಿತು ಮತ್ತು ಭಯಭಕ್ತಿಯಲ್ಲಿ ಪರಸ್ಪರ ಸಹಕರಿಸುವವರಾಗಬೇಕು.

ಓ ಸಹೋದರರೇ! ಪಠ್ಯ ಸಿಲೆಬಸ್‌ಗಳಲ್ಲಿ ಅಕೀದಃವನ್ನು ನಿಷೇಧಿಸುವ ವಿಷಯಗಳಿರುತ್ತವೆ. ಸ್ವಭಾವವನ್ನು ನಿಷೇಧಿಸುವ ವಿಷಯಗಳಿರುತ್ತವೆ. ಆದ್ದರಿಂದ ಅವುಗಳನ್ನು ಸೂಕ್ಷ್ಮವಾಗಿ ಪರಿಶೋಧಿಸುವುದು ಕಡ್ಡಾಯವಾಗಿದೆ. ಹಾಗೇನಾದರೂ ಕಂಡರೆ ನಾವು ಅದನ್ನು ಸಂಬಂಧಪಟ್ಟವರಿಗೆ ತಿಳಿಸಬೇಕಾಗಿದೆ. ಆದರೆ ನಾನಿಲ್ಲಿ ಎಲ್ಲ ಸಿಲೆಬಸ್‌ಗಳೂ ಹೀಗಿರುತ್ತವೆಯೆಂದು ಹೇಳುವುದಿಲ್ಲ. ಆದರೆ ಇಂಗ್ಲಿಷ್ ಮಾಧ್ಯಮಗಳಲ್ಲಿರುವ ಸಿಲೆಬಸ್‌ಗಳಲ್ಲಿ ಇಂತಹ ವಿಷಯಗಳು ಹೆಚ್ಚಾಗಿ ಕಂಡುಬರುತ್ತವೆ. ಅವುಗಳಲ್ಲಿ ಅಕೀದಃಕ್ಕೆ ವಿರುದ್ಧವಾಗಿರುವ ಮತ್ತು ಸ್ವಭಾವವನ್ನು ಧ್ವಂಸ ಮಾಡುವಂತಹ ವಿಷಯಗಳನ್ನು ಮತ್ತು ಇಸ್ಲಾಮೇತರ ಶಿಷ್ಟಾಚಾರಗಳನ್ನು ಕಲಿಸಲಾಗುತ್ತವೆ. ಆದ್ದರಿಂದ ಇವುಗಳ ಬಗ್ಗೆ ಎಚ್ಚರ ವಹಿಸುವುದು ನಮ್ಮ ಮೇಲೆ ಕಡ್ಡಾಯವಾಗಿದೆ.

ಅದೇ ರೀತಿ ಪರೀಕ್ಷೆಗಳನ್ನು ಅಸಡ್ಡೆ ಮತ್ತು ಅಲಕ್ಷ್ಯಗಳಿಂದ ಸಂರಕ್ಷಿಸುವುದು ಅಮಾನತ್ ಆಗಿದೆ. ಪರೀಕ್ಷೆಗಾಗಿ ಪ್ರಶ್ನೆಗಳನ್ನು ರಚಿಸುವಾಗ ವಿದ್ಯಾರ್ಥಿಗಳ ಬೌದ್ಧಿಕ ಮತ್ತು ಜ್ಞಾನ ಮಟ್ಟಗಳನ್ನು ಗಮನದಲ್ಲಿರಿಸಬೇಕಾಗಿದೆ. ಯಾಕೆಂದರೆ ಅವು ಅವರ ಮಟ್ಟಕ್ಕೆ ಮಿಗಿಲಾಗಿದ್ದರೆ ಅವು ಅವರಿಗೆ ಹಾನಿ ಮಾಡುವುದು ಮತ್ತು ಅವರ ಶೈಕ್ಷಣಿಕ ವರ್ಷವನ್ನು ಹಾಳು ಮಾಡುವುದು. ಅದೇ ರೀತಿ ಪರೀಕ್ಷೆ ನಡೆಯುವಾಗ ವಿದ್ಯಾರ್ಥಿಗಳ ಮೇಲ್ನೋಟ ವಹಿಸುವವನು ತನ್ನ ಸಂಬಂಧಿಕರ ಮಕ್ಕಳು ಅಥವಾ ತನ್ನ ಗೆಳೆಯರ ಮಕ್ಕಳಿಗೆ ಹೆಚ್ಚು ಸಮಯ ನೀಡಿ ಇತರ ವಿದ್ಯಾರ್ಥಿಗಳೊಂದಿಗೆ ಬೇಧ ಕಲ್ಪಿಸಬಾರದು. ಅದೇ ರೀತಿ ಉತ್ತರ ಪತ್ರಿಕೆಗಳನ್ನು ತಿದ್ದುವವರು ವ್ಯವಸ್ಥೆಯು ನಿಯಮಗೊಳಿಸಿದ ರೀತಿಯಲ್ಲೇ ತಿದ್ದಬೇಕಾಗಿದೆ. ಅವನಿಂದ ಯಾವುದೇ ವಿದ್ಯಾರ್ಥಿಗೂ ಅನ್ಯಾಯವಾಗಬಾರದು. ಹೀಗೆ ನಾವು ಈ ಅಮಾನತ್‌ಗಳನ್ನು ಪಾಲಿಸಿದರೆ ನಾವು ನಮ್ಮ ಹೊಣೆಗಾರಿಕೆಗಳನ್ನು ನಿಭಾಯಿಸಿದವರಾಗುವೆವು. ಇದರಿಂದಾಗಿ ನಮ್ಮ ಸಮಾಜವು ಉತ್ತಮವಾಗುವುದು.

ಓ ಮುಸ್ಲಿಮರೇ! ಓ ಅಲ್ಲಾಹನಲ್ಲಿ ಮತ್ತು ಅವನ ರಸೂಲರಲ್ಲಿ ವಿಶ್ವಾಸವಿಟ್ಟವರೇ! ಅಮಾನತ್‌ಗಳನ್ನು ನೆರವೇರಿಸುವುದರಲ್ಲಿ ಅತ್ಯಾಸಕ್ತಿ ತೋರಿಸಿರಿ. ಅದರಲ್ಲಿ ಅಚಲವಾಗಿ ನಿಲ್ಲುವುದಕ್ಕಾಗಿ ಅಲ್ಲಾಹನೊಂದಿಗೆ ಪ್ರಾರ್ಥಿಸಿರಿ.

ಓ ಅಲ್ಲಾಹ್! ನೀನು ತೃಪ್ತಿಪಡುವ ರೀತಿಯಲ್ಲಿ ಅಮಾನತ್‌ಗಳನ್ನು ನೆರವೇರಿಸಲು ನಮಗೆ ಸಹಾಯ ಮಾಡು. ಅಮಾನತ್‌ಗಳನ್ನು ಹಾಳು ಮಾಡುವುದರಿಂದ ಮತ್ತು ಅದರ ಬಗ್ಗೆ ಅಸಡ್ಡೆ ವಹಿಸುವುದರಿಂದ ನಾವು ನಿನ್ನೊಂದಿಗೆ ರಕ್ಷಣೆಯನ್ನು ಬೇಡುತ್ತಿದ್ದೇವೆ. ಖಂಡಿತವಾಗಿಯೂ ನೀನು ಉದಾರಿಯೂ ಗೌರವಾನ್ವಿತನೂ ಆಗಿರುವೆ. ■

# .....ಮುಫ್ತಿಗಳಿಂದುಂಟಾಗುವ ಅಪಾಯ!

7ನೆ ಪುಟದಿಂದ

﴿ فَمَنۡ أَظۡلَمُ مِمَّنِ ٱفۡتَرَىٰ عَلَى ٱللَّهِ كَذِبٗا لِّيُضِلَّ ٱلنَّاسَ بِغَيۡرِ عِلۡمٍۚ إِنَّ ٱللَّهَ لَا يَهۡدِي ٱلۡقَوۡمَ ٱلظَّٰلِمِينَ ١٤٤ ﴾

“ಯಾವುದೇ ಅರಿವಿಲ್ಲದೆ ಜನರನ್ನು ದಾರಿಗೆಡಿಸುವುದಕ್ಕಾಗಿ ಅಲ್ಲಾಹುವಿನ ಮೇಲೆ ಸುಳ್ಳು ಹೆಣೆದವನಿಗಿಂತ ದೊಡ್ಡ ಅಕ್ರಮಿ ಇನ್ನಾರಿರುವನು? ಖಂಡಿತವಾಗಿಯೂ ಅಕ್ರಮಿಗಳಾದ ಜನರನ್ನು ಅಲ್ಲಾಹು ಸನ್ಮಾರ್ಗದಲ್ಲಿ ಸೇರಿಸಲಾರನು.” [ಕುರ್‌ಆನ್ 6:144]

ಅಲ್ಲಾಹು ಇನ್ನೊಂದು ಕಡೆ ಹೇಳುತ್ತಾನೆ;

﴿ وَلَا تَقۡفُ مَا لَيۡسَ لَكَ بِهِۦ عِلۡمٌۚ إِنَّ ٱلسَّمۡعَ وَٱلۡبَصَرَ وَٱلۡفُؤَادَ كُلُّ أُوْلَٰٓئِكَ كَانَ عَنۡهُ مَسۡـُٔولٗا ٣٦ ﴾

“ಯಾವುದರ ಕುರಿತು ನಿನಗೆ ಅರಿವಿಲ್ಲವೋ ಅದನ್ನು ನೀನು ಹಿಂಬಾಲಿಸಬಾರದು. ಖಂಡಿತವಾಗಿಯೂ ಆಲಿಸುವಿಕೆ, ದೃಷ್ಟಿ ಮತ್ತು ಹೃದಯ ಇವೆಲ್ಲವೂ ವಿಚಾರಣೆಗೆ ಒಳಗಾಗುವುದು” [ಕುರ್‌ಆನ್ 17:36]

ಮನ್‌ಹಜುಸ್ಸಲಫ್‌ನಿಂದ ಪಥಭ್ರಷ್ಟರಾಗಲಿರುವ ಕಾರಣಗಳ ಪೈಕಿ ಧರ್ಮದ ಬಗ್ಗೆಯಿರುವ ಅಜ್ಞಾನವು ಒಂದು ಪ್ರಮುಖ ಕಾರಣವಾಗಿದೆ ಎಂಬುದನ್ನು ನಾವು ಅರಿಯಲೇ ಬೇಕಾಗಿದೆ. ಆದ್ದರಿಂದ ನಾವು ಇಲ್ಮ್ ಇರುವವರಿಂದ ಇಲ್ಮ್ ಅನ್ನು ಪಡೆಯಲು ಸನ್ನದ್ಧರಾಗಬೇಕು. ಅಲ್ಲಾಹು ಹೇಳುತ್ತಾನೆ;

﴿ فَسۡـَٔلُوٓاْ أَهۡلَ ٱلذِّكۡرِ إِن كُنتُمۡ لَا تَعۡلَمُونَ ٤٣ ﴾

“ನೀವು ಅರಿವಿಲ್ಲದವರಾಗಿದ್ದರೆ ಅರಿವಿರುವವರೊಂದಿಗೆ ವಿಚಾರಿಸಿರಿ” [ಕುರ್‌ಆನ್ 16:43]

ಇಲ್ಮ್ ಇರುವವರು ಮತ್ತು ಇಲ್ಮ್ ಇಲ್ಲದವರು ಸಮಾನರಾಗುವರೇ ಎಂದು ಅಲ್ಲಾಹು ತನ್ನ ಗ್ರಂಥದಲ್ಲಿ ಮನುಷ್ಯನ ಮನಮುಟ್ಟುವ ಶೈಲಿಯಲ್ಲಿ ಕೇಳುತ್ತಾನೆ;

﴿ قُلۡ هَلۡ يَسۡتَوِي ٱلَّذِينَ يَعۡلَمُونَ وَٱلَّذِينَ لَا يَعۡلَمُونَۗ إِنَّمَا يَتَذَكَّرُ أُوْلُواْ ٱلۡأَلۡبَٰبِ ٩ ﴾

“(ಓ ಪ್ರವಾದಿಯವರೇ!) ಕೇಳಿರಿ: ಇಲ್ಮ್ ಇರುವವರು ಮತ್ತು ಇಲ್ಮ್ ಇಲ್ಲದವರು ಸಮಾನರಾಗುವರೇ? ಕೇವಲ ಬುದ್ಧಿವಂತರು ಮಾತ್ರ ಗ್ರಹಿಸುತ್ತಾರೆ.” [ಕುರ್‌ಆನ್ 39:9]

[ಮುಂದುವರಿಯುವುದು ಇನ್‌ಶಾ ಅಲ್ಲಾಹ್]

# ವೈವಾಹಿಕ ಜೀವನದ ಶಿಷ್ಟಾಚಾರಗಳು

8ನೆ ಪುಟದಿಂದ

ಅನ್ಸಾರ್‌ಗಳಲ್ಲಿ ಸೇರಿದ ಒಬ್ಬ ಮಹಿಳೆಯನ್ನು ವಿವಾಹವಾದರು. ಅವರು ಆ ಮಹಿಳೆಯೊಂದಿಗೆ ಅದನ್ನು ಮಾಡಲಾರಂಭಿಸಿದರು. ಆದರೆ ಆಕೆ ಅದನ್ನು ವಿರೋಧಿಸಿದಳು. ಆಕೆ ಹೇಳಿದಳು: ನಮ್ಮನ್ನು ಸಂಭೋಗಿಸಲಾಗುವುದು ಒಂದು ಪಾರ್ಶ್ವದಿಂದ ಮಾತ್ರ. ಹಾಗೆ ಮಾಡುವುದಾದರೆ ಮಾಡು. ಇಲ್ಲದಿದ್ದರೆ ನನ್ನಿಂದ ದೂರ ಹೋಗು. ಕೊನೆಗೆ ವಿಷಯವು ಬಿಗಡಾಯಿಸಿ ಅದು ಪ್ರವಾದಿ (ﷺ)ರವರನ್ನು ತಲುಪಿತು. ಆಗ ಅಲ್ಲಾಹು ಅವತೀರ್ಣಗೊಳಿಸಿದನು: ‘ನಿಮ್ಮ ಪತ್ನಿಯರು ನಿಮ್ಮ ಹೊಲವಾಗಿರುವರು. ಆದ್ದರಿಂದ ನೀವು ಬಯಸುವ ರೀತಿಯಲ್ಲಿ ನೀವು ನಿಮ್ಮ ಹೊಲದೆಡೆಗೆ ತೆರಳಿರಿ.’ [ಕುರ್‌ಆನ್ 2:223]. ಅಂದರೆ ಮುಂಭಾಗದಿಂದ, ಹಿಂಭಾಗದಿಂದ ಮತ್ತು ಅಂಗಾತ ಮಲಗಿಸಿ. ಆದರೆ ಇಲ್ಲಿ ಉದ್ದೇಶ ಮಗು ಹೊರಬರುವ ದ್ವಾರ (ಯೋನಿ) ಮಾತ್ರವಾಗಿದೆ. [ಅಬೂದಾವೂದ್, ಅಲ್‌ಬೈಹಕಿ, ಅಲ್‌ಹಾಕಿಮ್, ಅಲ್‌ವಾಹಿದೀ ಅಲ್‌ಅಸ್ಬಾಬ್‌ನಲ್ಲಿ ಮತ್ತು ಅಲ್‌ಖತ್ತಾಬೀ ಗರೀಬುಲ್ ಹದೀಸ್‌ನಲ್ಲಿ.]

[ಮುಂದುವರಿಯುವುದು ಇನ್‌ಶಾ ಅಲ್ಲಾಹ್]



## ಅಲ್‌ಇಮಾಮ್ ಅಶ್ಶಾಫಿಈ(رحمه الله)ರವರ ಕವಿತೆ

شَكَوْتُ إِلَى وَكِيعٍ سُوءَ حِفْظِي ** فَأَرْشَدَنِي إِلَى تَرْكِ الْمَعَاصِي
وَقَالَ بِأَنَّ الْعِلْمَ نُورٌ ** وَنُورُ اللَّهِ لَا يُؤْتَاهُ عَاصِي

“ನನ್ನ ನೆನಪು ಶಕ್ತಿಯ ಕೊರತೆಯ ಬಗ್ಗೆ ನಾನು (ನನ್ನ ಉಸ್ತಾದರಾದ) ವಕೀಅ್ (رحمه الله)ರೊಂದಿಗೆ ತೋಡಿಕೊಂಡೆ. ಆಗ ಅವರು ಪಾಪಗಳನ್ನು ವರ್ಜಿಸುವುದರೆಡೆಗೆ ನನಗೆ ನಿರ್ದೇಶನ ನೀಡಿದರು. ಅವರು ಹೇಳಿದರು: ಇಲ್ಮ್ ಎಂಬುದು ಒಂದು ಪ್ರಕಾಶವಾಗಿದೆ. ಅಲ್ಲಾಹನ ಪ್ರಕಾಶವನ್ನು ಅವನು ಪಾಪಿಗೆ ನೀಡಲಾರನು.”

Printed and published by Abubakkar Nazeer Salafi on behalf of Salafi Publishing House, Mangalore. Editor: Muhammad Hamza Puttur, Printed at Digantha Mudrana Ltd, Yeyyadi, Mangalore, D.K. Published at Mangalore.